

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೪೭ ಜೂನ್ ೨೦೧೧ ಸಂಚಿಕೆ : ೬




ದಿನಾಂಕ ೧೭-೪-೨೦೧೧ ರಂದು ಮೈಸೂರಿನಲ್ಲಿ ನಡೆದ ೭೭ನೇ ಅಖಿಲ ಭಾರತ ಮಹಾ ಅಧಿವೇಶನವನ್ನು ಮಾನ್ಯ ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪನವರು ಜ್ಯೋತಿ ಬೆಳಗಿಸುವ ಮೂಲಕ ಉದ್ಘಾಟಿಸಿದರು. ಸಮಾರಂಭದಲ್ಲಿ ಜಗದ್ಗುರುಗಳಾದ ರಂಭಾಪುರಿ ಶ್ರೀಗಳು, ತರಳಬಾಳು ಶ್ರೀಗಳು, ಸುತ್ತೂರು ಶ್ರೀಗಳು, ಸಿದ್ಧಗಂಗಾ ಶ್ರೀಗಳು, ಕೊಟ್ಟೂರು ಶ್ರೀಗಳು, ಬಿಜಾಪುರದ ಶ್ರೀಗಳು ಹಾಗೂ ರಾಜ್ಯದ ಸಚಿವರು ಹಾಗೂ ಗಣ್ಯರು ಉಪಸ್ಥಿತರಿದ್ದರು



೭೭ನೇ ಮಹಾ ಅಧಿವೇಶನದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಗಂಗಾ ಶ್ರೀಗಳು ಆಶೀರ್ವಚನ ನೀಡುತ್ತಿರುವುದು



೭೭ನೇ ಮಹಾ ಅಧಿವೇಶನದಲ್ಲಿ ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪನವರಿಗೆ ಪೂಜ್ಯರುಗಳಿಂದ ಆಶೀರ್ವಾದ

ಹುದ್ದೆಯನ್ನು ನನಗೆ ಬಿಟ್ಟುಕೊಡದೆ ನನ್ನನ್ನು ತನ್ನ ಸಹಾಯಕನನ್ನಾಗಿ ತೆಗೆದುಕೊಂಡನು. ನನ್ನ ಕೆಲಸವೇ ನಿದ್ದರೂ ಸ್ಟೂಲ್ ಮೇಲೆ ಕುಳಿತು ಮಿಲ್ಲಿನ ಬಾಯಿಂದ ಹೊರಬೀಳುತ್ತಿದ್ದ ರಾಗಿ, ಗೋಧಿ, ಅಕ್ಕಿ ಹಿಟ್ಟು, ದನಿಯಾ ಹಾಗೂ ಮೆಣಸಿನಪುಡಿ ಇತ್ಯಾದಿಗಳನ್ನು ಚೀಲ ಅಥವಾ ಡಬ್ಬ ಹಿಡಿದುಕೊಂಡು ಸಂಗ್ರಹಿಸುವುದಷ್ಟೆ ನನ್ನ ಸೀನಿಯರ್ ಬಾಸ್ ಮೋಟರ್ ಸ್ಟಾರ್ಟ್ ಮಾಡುವುದು, ಆಫ್ ಮಾಡುವುದು, ಬೆಲ್ಟ್ ಬದಲಾಯಿಸುವುದು, ಬೀಸುವ ಕಲ್ಲುಗಳನ್ನು ಬಿಚ್ಚಿ ಬದಲಾಯಿಸುವುದು, ಸಣ್ಣಪುಟ್ಟ ರಿಪೇರಿ ಹಾಗೂ ಗ್ರಾಹಕರಿಂದ ಹಣ ಪಡೆದು ಲೆಕ್ಕ ಬರೆದಿಡುವುದು ಇತ್ಯಾದಿ ಇತ್ಯಾದಿ ಹತ್ತು ಹಲವು ಜವಾಬ್ದಾರಿಗಳು.

ಒಮ್ಮೆ ರಾಗಿ ಹಿಟ್ಟನ್ನು ಸ್ವಲ್ಪ ನುಣ್ಣಗೆ ಹಾಕುವಂತೆ ತಿಳಿಸಲು ಉಗ್ರಾಣದ ಶಾಸ್ತ್ರಿಗಳವರು ಮಿಲ್ ಬಳಿ ಬಂದಾಗ ಯಾರರೋ ಹುರಿಟ್ಟನ್ನು ಪುಕ್ಕಟೆಯಾಗಿ ಹಾಕಿಕೊಟ್ಟದ್ದನ್ನು ಗಮನಿಸಿದ ಅವರು ಅವರಿಂದಲೂ ಅಲ್ಪಸ್ವಲ್ಪ ಹಣ ಪಡೆಯುವಂತೆ ಸಲಹೆ ನೀಡಿದರು. ನಾವು ಶ್ರೀ ಶ್ರೀಗಳವರ ಅಪ್ಪಣೆಯಾಗಿದೆಯೆಂದು ತಿಳಿಸಿದಾಗ 'ಓಹೋ ಹಾಗೋ? ಹಾಗಾದರೆ ಒಂದು ಕೆಲಸ ಮಾಡಿ ಹಿಟ್ಟು ಮಾಡಿಕೊಟ್ಟದ್ದಕ್ಕೆ ಪ್ರತಿಯಾಗಿ ಒಂದೆರೆಡು ಹಿಡಿಯಷ್ಟು ಹಿಟ್ಟನ್ನು ಪ್ರತಿಯೊಬ್ಬ ರಿಂದಲೂ ಸಂಗ್ರಹಿಸಿಟ್ಟುಕೊಳ್ಳಿ. ನಾನು ನಿಮಗೆ ಬೆಲ್ಲ, ಏಲಕ್ಕಿ, ಕೊಬ್ಬರಿಗಳನ್ನು ಕೊಡಿಸುವ ವ್ಯವಸ್ಥೆ ಮಾಡುತ್ತೇನೆ. ಹೇಗಿದ್ದರೂ ನೀನು ರಜೆಗಳಲ್ಲಿ ಊರಿಗೆ ಹೋಗುವವರಲ್ಲ. ಪಾಪ ನಿಮಗೆ ಹುರಿಟ್ಟನ್ನು ಯಾರು ಮಾಡಿಕೊಡುತ್ತಾರೆ?' ಎಂದು ತಿಳಿಸಿ ಅದಕ್ಕಾಗಿ ಒಂದು ಪ್ರತ್ಯೇಕ ಸಂಗ್ರಹಣಾ ಡಬ್ಬವನ್ನು ಕೊಟ್ಟು ಹೋದರು. ಅಂದಿನಿಂದ ಈ ಹೊಸ ಪದ್ಧತಿ ಜಾರಿಗೆ ಬಂದಿತಲ್ಲದೆ ಈ ಸುಂಕ ಹಿಟ್ಟಿನ ರೂಪದಲ್ಲಿ ಸಂಗ್ರಹಣೆಯ ಎರಡನೇ ಜವಾಬ್ದಾರಿ ನನಗೇ ವಹಿಸಲ್ಪಟ್ಟಿದ್ದ ರಿಂದ ನನಗೆ ನನ್ನ ಕೆಲಸದಲ್ಲಿ ಮುಂಬಡ್ತಿ ಪಡೆದಷ್ಟೇ ಸಂತೋಷವಾಯಿತು. ಕಾಲಕ್ರಮೇಣ ಕೊನೆಯಲ್ಲಿ ಮೋಟರ್ 'ಆಫ್' ಮಾಡುವ ಚಿಕ್ಕ ಕೆಲಸವೂ ನನಗೆ ದಕ್ಕಿತು. ಇನ್ನೂ ಕೆಲವು ತಿಂಗಳ ನಂತರ ಮೋಟರ್ 'ಆನ್' ಮಾಡುವ ಮಟ್ಟಕ್ಕೂ ಸ್ವಾತಂತ್ರ್ಯ ವಹಿಸಿಕೊಂಡೆ ನಲ್ಲದೆ ಬೀಸುವ ಕಲ್ಲಿನ ನಿಯಂತ್ರಣ ಚಕ್ರವನ್ನು ಹಿಡಿಯುವ ಬಗ್ಗೆಯೂ ತರಬೇತಿ ದೊರಯಿತು.

ಹುರಿಟ್ಟಿನ ಸಂಗ್ರಹಣೆಯ ವಿಷಯ ಒಮ್ಮೆ ಶ್ರೀ ಶ್ರೀಗಳವರು ಮಿಲ್‌ಗೆ ಪರಿಶೀಲನೆಗೆಂದು ಬಂದಾಗ ಗೊತ್ತಾಯಿತು. ಮೂಲೆಯಲ್ಲಿ ಅರ್ಧದಷ್ಟು ತುಂಬಿದ್ದ ಹಿಟ್ಟಿನ ಡಬ್ಬವನ್ನು ಗಮನಿಸಿದ ಶ್ರೀಗಳವರು ಆ ಬಗ್ಗೆ ವಿಚಾರಿಸಿ ದಾಗ ನಾವು ವರದಿ ಒಪ್ಪಿಸಿದೆವು. ಅದಕ್ಕೆ ಶ್ರೀಗಳವರು 'ಇಷ್ಟೊಂದು ಹುರುಟ್ಟನ್ನು ನೀವಿಬ್ಬರೇ ಯಾವಾಗ ತಿನ್ನುತ್ತೀರಿ' ಬೆಲ್ಲ ಎಲ್ಲ ಆಗಲೇ ಸಪ್ಲೈ ಆಗಿದೆಯೋ?' ಎಂದು ತಮಾಷೆ ಮಾಡುತ್ತಾ ಕೇಳಿ ಕೊನೆಗೆ ಹುರಿಟ್ಟನ್ನು ಮಜ್ಜಿಗೆಯಲ್ಲಿ ಕಲೆಸಿಕೊಂಡು ತಿನ್ನುವುದು ಒಳ್ಳೆಯದೆಂತಲೂ, ಹಾಗೆ ಮಾಡುವುದರಿಂದ ಹಿಟ್ಟಿನ ಗಿರಣಿಯಲ್ಲಿ ಕೆಲಸಮಾಡುವ ನಮಗೆ ಅದು ತಂಪನ್ನು ನೀಡುವುದೆಂತಲೂ ಸೂಚಿಸಿ ನಮ್ಮ ಕಾರ್ಯಕ್ಕೆ ಮೆಚ್ಚುಗೆ ನೀಡಿ ಮುಗುಳ್ನಕ್ಕು ಅಲ್ಲಿಂದ ದಯಮಾಡಿಸಿದರು. ಆನಂತರ ನಮ್ಮಿಬ್ಬರಿಗೂ ಉಗ್ರಾಣ ದಿಂದ ಆಗಾಗ್ಗೆ ಗಟ್ಟಿಮಜ್ಜಿಗೆ, ಒಣ ದ್ರಾಕ್ಷಿ, ಖರ್ಜೂರ, ಪರಂಗಿ ಹಣ್ಣು, ಬಾಳೆಹಣ್ಣು, ಇತ್ಯಾದಿ ಸರಬರಾಜಾಗುತ್ತಿದ್ದ ಅದನ್ನು ನಾವು ಮಿಲ್ಲುಗಳಲ್ಲಿ ನೌಕರರಿಗೆ ಸಿಗುತ್ತಿದ್ದ 'ಬೋನಸ್' ಎಂದು ಭಾವಿಸಿ ಸಂಭ್ರಮಿಸುತ್ತಿದ್ದೆವೆ.

❖

## ಶ್ರೀವಾಣಿ

ಸ್ವಾರ್ಥ ಜೀವನವನ್ನು ನಡೆಸಿ ಅಪಾರ ಐಶ್ವರ್ಯವನ್ನು ಗಳಿಸುವುದಕ್ಕಿಂತ ಸಾಮಾನ್ಯ ಜನರ ದುಃಖದ ನೂರರಲ್ಲಿ ಒಂದು ಪಾಲನ್ನಾದರೂ ಹೋಗಲಾಡಿಸಲು ನಿನ್ನ ಜೀವಮಾನವನ್ನೆಲ್ಲಾ ಕಳೆಯುವುದು ಶ್ರೇಯಸ್ಕರ. ನಿನ್ನ ಸುತ್ತಮುತ್ತಲೂ ರೋಗರುಜಿನಗಳೂ, ಕೊಳೆ ಕಲ್ಮಶಗಳೂ, ಅತೃಪ್ತಿ ಅಶಾಂತಿಗಳೂ ತುಂಬಿರುವಾಗ ನೀನೊಬ್ಬನೇ ಸುಖಿಯಾಗಿರಲು ಸಾಧ್ಯವೇ? ಇವುಗಳನ್ನು ಹೋಗಲಾಡಿಸಿ ಪ್ರಪಂಚದ ಸ್ಥಿತಿಯನ್ನು ಸ್ವಲ್ಪ ವಾದರೂ ಉತ್ತಮಗೊಳಿಸಲು ಪ್ರಯತ್ನಿಸುವುದೇ ಎಲ್ಲರ ಕರ್ತವ್ಯವಾಗಿದೆ. ನೀನೂ ಇದೇ ಗುರಿಯನ್ನೇ ಸಾಧಿಸಬೇಕು. ಒಬ್ಬೊಬ್ಬನೂ ಇದನ್ನು ಬೇರೆ ಬೇರೆಯಾಗಿ ಸಾಧಿಸುವುದು ಕಷ್ಟಸಾಧ್ಯ. ಆದರೂ ಎಲ್ಲರೂ ತಮ್ಮ ತಮ್ಮ ಭಾಗದ ಕರ್ತವ್ಯವನ್ನು ಮಾಡಬೇಕು. ಪ್ರಪಂಚದ ಈ ನಾಟಕದಲ್ಲಿ ನಿನ್ನ ಪಾತ್ರವನ್ನು ನೀನೂ ಉತ್ತಮ ರೀತಿಯಲ್ಲಿ ನಿರ್ವಹಿಸು.

## ಆರೋಗ್ಯ

ವಿಶ್ವಾಸದಿಂದ ಶ್ರೇಷ್ಠವಾಗಿ ದಾನ ಮಾಡುವುದು. ನೆರೆಹೊರೆಗೆ ಸ್ವಾರ್ಥವಿಲ್ಲದೆ ಕೈಗೊಂಡ ಕರ್ತವ್ಯ ಪೂರ್ಣಗೊಳಿಸುವುದು. ಇದ್ದುದರಲ್ಲಿಯೇ ಸುಖ ಹೊಂದಿ ನಿಜವಾದ ಸಂತೃಪ್ತಿ ಪಡೆಯುವುದು. ಸಮಯ ಸಂದರ್ಭಗಳನ್ನರಿತು ತಿಳುವಳಿಕೆಯಿಂದ ನೆಮ್ಮದಿಯಲ್ಲಿ ಕಾಲ ಕಳೆಯುವುದು. ಪರರ ಸಹಾಯವನ್ನು ಪಡೆದಾಗ ಉಪಕಾರ ಸ್ಮರಣೆಯಿಂದ ಕೃತಜ್ಞತೆ ಹೇಳುವುದು. ಹಣ–ಅಧಿಕಾರ–ಆಮಿಷಗಳಿಗೆ ತನ್ನತನವನ್ನು ಕಳೆದುಕೊಳ್ಳದಿರುವುದು. ತಾನು–ತನ್ನದು–ತನ್ನಿಂದವೆಂಬ ಸ್ವಾರ್ಥ ಮರೆತು ಮತ್ತೊಬ್ಬರಿಗೆ ನೆರವಾಗುವುದು. ಇತರರ ಅಭಿವೃದ್ಧಿ ಕಂಡು ಮನದಲ್ಲಿಯೂ ಅಸೂಯೆಪಡದಿರುವುದು. ತನ್ನಷ್ಟು ಬುದ್ಧಿವಂತಿಕೆ ಇನ್ನಾರಲ್ಲೂ ಇಲ್ಲವೆಂಬ ಅಹಂಕಾರ ತೋರದಿರುವುದು.

ಹೀಗೆ ಶಿಸ್ತು, ಸಮಯಪ್ರಜ್ಞೆ, ದುಡಿಮೆ ಮತ್ತು ಪ್ರಾಮಾಣಿಕತೆ ಈ ಎಲ್ಲ ಗುಣಗಳನ್ನು ಬೆಳೆಯಿಸಿಕೊಂಡರೆ ಮಾತ್ರ ನಾವು ಇನ್ನಷ್ಟು ಉತ್ತಮ ವ್ಯಕ್ತಿತ್ವ ಬೆಳೆಯಿಸಿಕೊಳ್ಳಲು ಸಾಧ್ಯ. ಈಚೆಗೆ ಆರೋಗ್ಯಾಭ್ಯಾಸಗಳ ಕಡೆಗೆ ನಮ್ಮ ಗಮನ ತೀರ ಕಡಿಮೆಯಾಗುತ್ತಿದೆ. 'ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ' ಎನ್ನುವಂತೆ ನಾವು ನಿತ್ಯವೂ ಸತ್ಯದ ಸಹವಾಸ, ಸಹಯೋಗ, ಸದ್ವಿಚಾರಗಳೊಡನೆ ಸದಾಚಾರಿಯಾಗಿರಬೇಕು. ಅಲ್ಲದೆ ದಿನವೂ ಸಮಯಕ್ಕೆ ಹೆಚ್ಚು ಬೆಲೆ ಕೊಡಬೇಕು. ಪ್ರಗತಿದಾಯಕ ಕೆಲಸಗಳನ್ನು ಶಿಸ್ತುಬದ್ಧವಾಗಿ ಸಮಯಾಲೋಚನೆಯ ಮೂಲಕ ಮಾಡಿದಾಗಲೇ ಫಲಿತಾಂಶ ನಿರೀಕ್ಷಿಸಿದ ಹಾಗೆ ಲಭ್ಯವಾಗುತ್ತದೆ. ಹಾಗಾಗದಿದ್ದಲ್ಲಿ ಆ ಕಾರ್ಯ ನಿರ್ವಹಣೆಗೆ ಮತ್ತೊಮ್ಮೆ ಸೂಕ್ತ ಸಮಯಕ್ಕಾಗಿ ಹಗಲಿಡೀ ಕಾಯಬೇಕಾಗುತ್ತದೆ. ಅದೇ ರೀತಿ ಸದಾ ಜಾಗೃತಾವಸ್ಥೆಯಲ್ಲಿದ್ದು ತೆರೆದ ಮನಸ್ಸಿನಿಂದ ಉತ್ತಮ ಅಭ್ಯಾಸಗಳನ್ನು ಅನುಸರಿಸುತ್ತಾ ಉತ್ತಮ ವ್ಯಕ್ತಿತ್ವ ಪಡೆಯಬೇಕು. ಸದಾ ಒಳ್ಳೆಯ ವಿಚಾರಗಳನ್ನು ಮಾಡುತ್ತಾ ಒಳ್ಳೆಯದನ್ನೇ ಕಾಣಬೇಕು, ಬಾಯಿಂದ ಯಾವಾಗಲೂ ಒಳ್ಳೆಯದನ್ನೇ ಮಾತನಾಡಬೇಕು. ಯಾವುದೇ ಕಷ್ಟದ ಪರಿಸ್ಥಿತಿಗಳ ಸಂದರ್ಭದಲ್ಲೂ ಎದೆಗುಂದದೇ ಸಮಚಿತ್ತದಲ್ಲಿ ಬಾಳುವುದೂ ಒಂದು ವಿಶಿಷ್ಟ ಕಲೆ. ಈ ಕಲಾನಿಪುಣತೆಯನ್ನು ಹಂತಹಂತವಾಗಿ ಮೈಗೂಡಿಸಿಕೊಳ್ಳಬೇಕಷ್ಟೆ. ಈ ಕುರಿತು ಕವಿಗಳಾದ ಕೆ.ಸಿ. ಶಿವಪ್ಪನವರು ಚೌಪದಿಯಲ್ಲಿ ಹೀಗೆ ಹೇಳಿದ್ದಾರೆ;

***ಉಬ್ಬದಿರು ಸುಖದಲ್ಲಿ ಕುಗ್ಗದಿರು ಕಷ್ಟದಲ್ಲಿ***
***ಉರಿಬರಲಿ ಸಿರಿ ಬರಲಿ ಸಮಚಿತ್ತವಿರಲಿ***
***ಸುಲಭ ಅರಿವಿನ ದಾರಿ ಒಳನೋಟ ಅರಿತಾಗ***
***ಮತಿಗತಿಗೆ ಗುರು ನೀನೇ– ಮುದ್ದುರಾಮ***

ಒಮ್ಮೊಮ್ಮೆ ಮದ್ದಿಲ್ಲದ, ಮದ್ದು ಬೇಕಿಲ್ಲದ ರೋಗಗಳಿಗೊಳಗಾಗಿರುತ್ತೇವೆ. ಉದಾಹರಣೆಗೆ ಮತ್ತೊಬ್ಬರನ್ನು ಅಧಿಕ ಪ್ರಸಂಗಿತನದಿಂದ ವೃಥಾ ಹೊಗಳುವುದನ್ನು ರೂಢಿಸಿಕೊಂಡಿರುತ್ತೇವೆ. ಮೇಲ್ನೋಟಕ್ಕೆ ಸಹಜವಾಗಿ ಕಾಣಲ್ಪಡುವವರನ್ನು ತೀರಾ ಅಪ್ರಸ್ತುತವಾಗಿ, ಅನಾವಶ್ಯಕವಾಗಿ ಹೊಗಳುತ್ತಾ ಎದುರಿಗಿರುವವರಿಗೆ ಇರುರು–ಮುರುಸು ಮಾಡುವುದು ನಿಜಕ್ಕೂ ಒಳ್ಳೆಯ ಲಕ್ಷಣವಲ್ಲ. ಹಾಗೆಯೇ ಇನ್ನೊಬ್ಬರ ಮನಸ್ಸನ್ನು ನೋಯಿಸುವ ಹಾಗೆ ಮಾತಾಡುವುದಕ್ಕಿಂತ ಅವರ ಮನಸ್ಸನ್ನೇ ಗೆಲ್ಲುವಂತೆ ಮಾತಾಡುವುದು ಒಳ್ಳೆಯದು. ಇದಕ್ಕೆ ನಯ–ವಿನಯಗಳೂ ಮುಖ್ಯ. ವಿನಯವೆಂದರೆ ದೊಡ್ಡವರನ್ನು ಪ್ರಶ್ನಿಸದೇ ಇರುವುದಲ್ಲ. ಅಂಧಾನುಕರಣೆಯಲ್ಲ, ದುರಹಂಕಾರವಲ್ಲ– ನಿರಹಂಕಾರ. ವಿದ್ಯೆಗೂ–ವಿನಯಕ್ಕೂ ತುಂಬಾ ಹತ್ತಿರದ ನಂಟು. ಹಾಗಾಗಿ ವಿದ್ಯಾರ್ಜನೆ ಹೆಚ್ಚಾದಂತೆಲ್ಲಾ ಸಂಸ್ಕಾರಯುತವಾದ ನಡವಳಿಕೆಯ ಮೂಲಕ ವಿನಯಭೂಷಣಪ್ರಾಯವಾಗುತ್ತದೆ.

ಮೂರು ವರ್ಷದ ಬುದ್ಧಿ ನೂರು ವರ್ಷದ ತನಕ, ಕಲಿತ ಬುದ್ಧಿ ಕಲ್ಲು ಹಾಕಿದರೂ ಹೋಗದು, ನಾಲಿಗೆ ಒಳ್ಳೆಯದಿದ್ದರೆ ನಾಡೆಲ್ಲಾ ಒಳ್ಳೆಯದು, ನಾಯಿ ಬಾಲ ಸದಾ ಡೊಂಕು ಮುಂತಾದ ಗಾದೆಗಳಲ್ಲಿ ಮನುಷ್ಯನ ಗುಣಾವಗುಣಗಳ ವಿಶ್ಲೇಷಣೆ ಕಂಡುಬರುತ್ತವೆ. ಮನುಷ್ಯನ ಒಳ್ಳೆಯ ನಡತೆಗಳು ಅವನ ಒಟ್ಟು ವ್ಯಕ್ತಿತ್ವಕ್ಕೆ ಶುದ್ಧ ಕನ್ನಡಿಯಾಗಿರುವುದಲ್ಲದೆ, ದಾರಿದೀಪಗಳಾಗಿರುತ್ತವೆ. ಉತ್ತಮೋತ್ತಮ ಅಭ್ಯಾಸಗಳನ್ನು ಜೀವನದಲ್ಲಿ ಕಲಿತುಕೊಳ್ಳುವುದು, ಕೆಲವರಿಗೆ ತುಸು ಕಷ್ಟಪಡಬೇಕಾಗಬಹುದೇನೋ! ಆದರೆ ಅದರಿಂದ ಏನೆಲ್ಲಾ ಅವಕಾಶ, ಅನುಕೂಲ, ಅಗತ್ಯತೆ, ಆಕರ್ಷಣೆ, ಆತ್ಮೀಯತೆಗಳೂ ಲಭಿಸುತ್ತವೆ ಎಂಬುದಂತೂ ಸತ್ಯ.

ಹೀಗೆ ಜೀವನದಲ್ಲಿ ಅನೇಕಾನೇಕ ಆರೋಗ್ಯಾಭ್ಯಾಸಗಳನ್ನು ರೂಢಿಸಿಕೊಳ್ಳುವುದರ ಮೂಲಕ 'ಉತ್ತಮ ವ್ಯಕ್ತಿತ್ವ' ನಮ್ಮದಾಗುತ್ತದೆ. ಇದಕ್ಕೆ ಮೂಲಭೂತವಾಗಿ ನಮ್ಮ ಹಿಂದಿನ ಮಹಾನ್‌ವ್ಯಕ್ತಿಗಳ ಜೀವನ ಚರಿತ್ರೆಗಳನ್ನು ಓದುವುದರೊಂದಿಗೆ ಕಿಂಚಿತ್ತಾದರೂ ಬದಲಾವಣೆ ತಂದುಕೊಂಡಲ್ಲಿ ನಮ್ಮ ವಿಸ್ತಾರವಾದ ಬದುಕು ಸಾರ್ಥಕವಾಗುತ್ತದೆ. ❖



## ನೆನಪು

# ಶ್ರೀ ಶ್ರೀಗಳವರಲ್ಲಿ ನಾವು ಕಂಡ ಪ್ರೀತಿಯ ಮಹಾಪೂರ

* –ಕೆ.ಜಿ. ರಂಗಯ್ಯ

ನಾನು ಮಠಕ್ಕೆ ಸೇರಿದ ಮೊದಲವರ್ಷವದು. ಈ ಹಿಂದೆ ತಿಳಿಸಿರುವಂತೆ ಒಂದು ವರ್ಷಕಾಲ ಕಾರಣಾಂತರಗಳಿಂದ ಪ್ರೌಢಶಾಲಾ ವಿದ್ಯಾಭ್ಯಾಸವನ್ನು ಆರಂಭಿಸಲಾಗಲಿಲ್ಲ. ಆದ್ದರಿಂದ ಒಂದು ವರ್ಷ ಸಂಸ್ಕೃತಾಭ್ಯಾಸವನ್ನು ಮಾತ್ರ ಮಾಡಿಕೊಂಡು ನಾನು ಮತ್ತು ನನ್ನ ಒಡನಾಡಿ ಮಿತ್ರ ಆರ್. ವೀರಣ್ಣ ಮಠದಲ್ಲಿದ್ದೆವು. ಬೆಳಗಿನ ವೇಳೆಯಲ್ಲಷ್ಟೇ ನಾವು ಪಾಠಶಾಲೆಗೆ ಹೋಗಬೇಕಾಗಿದ್ದುದು. ಉಳಿದಂತೆ ದಿನವಿಡೀ ನಮಗೆ ಬಿಡುವೋ ಬಿಡುವು. ಆಗ ನಮ್ಮ ಆ ವೇಳೆಯನ್ನು ವ್ಯರ್ಥವಾಗಿ ಕಳೆದುಬಿಡುವ ಆತಂತ ನಮ್ಮನ್ನು ಕಾಡುತ್ತಿತ್ತು. ಆದರೆ ನಮ್ಮ ಉಗ್ರಾಣದ ಆಹಾರಮಂತ್ರಿಗಳವರು ಉದ್ಯೋಗ ಮಂತ್ರಿಗಳವರ ಸಹಕಾರ ಪಡೆದು ನಮ್ಮಿಬ್ಬರನ್ನು ಮಧ್ಯಾಹ್ನದಿಂದ ಸಂಜೆಯವರೆಗೂ ಕಾರ್ಯಪ್ರವೃತ್ತರನ್ನಾಗಿಸಲು ಉಪಾಯವೊಂದನ್ನು ಹುಡುಕಿದರು. ಅದೇನೆಂದರೆ ಶ್ರೀಮಠದ ದಾಸೋಹಕ್ಕೆ ಬೇಕಾಗುವ ರಾಗಿ ಹಿಟ್ಟನ್ನು ಮಾಡುತ್ತಿದ್ದ ಫ್ಲೋರ್ ಮಿಲ್ ಅನ್ನು ನಿರ್ವಹಿಸುವುದು. ಮಾರ್ಕಂಡೇಯ ನಿಲಯದ ಮುಂದಿನ ಗದ್ದುಗೆಯ ಹಿಂದೆ ಇದ್ದ ಹಿಟ್ಟಿನ ಗಿರಣಿಯಿಂದ ಮಠದ ಸ್ವಂತ ಉಪಯೋಗಕ್ಕಲ್ಲದೆ ಅಕ್ಕಪಕ್ಕದ ಬಂಡೇಪಾಳ್ಯ, ದೇವರಾಯಪಟ್ಟಣ, ಮಾರನಾಯ್ಕನಪಾಳ್ಯ ಇನ್ನಿತರ ಹಳ್ಳಿಗರಿಗೂ ಹಿಟ್ಟು ಮಾಡಿಕೊಡುವ ವ್ಯವಸ್ಥೆಯೂ ಇತ್ತು. ಆಗ ಹಿಟ್ಟಿನ ಗಿರಣಿಯ ಪಕ್ಕದಲ್ಲೇ ದನ ಎಮ್ಮೆಗಳನ್ನು ಕೂಡುತ್ತಿದ್ದ ಕೊಟ್ಟಿಗೆಯೂ ಇತ್ತೆಂದು ನೆನಪು. ಗದ್ದುಗೆಯ ಪಕ್ಕದಲ್ಲಿದ್ದ ದೊಡ್ಡ ತೆರೆದ ಬಾವಿಯಿಂದ ಅಡುಗೆ ಮನೆಗೆ ನೀರನ್ನು ಸರಬರಾಜು ಮಾಡಲಾಗುತ್ತಿತ್ತು. ನಾನು ಮಠಕ್ಕೆ ಸೇರುವ ಮುಂಚಿನ ದಿನಗಳಲ್ಲಿ ಮತ್ತು ನಾನು ಸೇರಿದ ಮೇಲೂ ವಿದ್ಯುತ್ ಕೈಕೊಟ್ಟಾಗ ಬಾವಿಯಿಂದ ನೀರನ್ನೂ ಕಪಿಲೆ ಬಾನಿಯ ಮೂಲಕ ವಿದ್ಯಾರ್ಥಿಗಳೇ ನೀರನ್ನು ಎಳೆಯುತ್ತಿದ್ದುದು ರೂಢಿಯಲ್ಲಿತ್ತು. ನಾವೆಲ್ಲರೂ ಎಲ್ಲೆ ಮೀರಿದ ಉತ್ಸಾಹದಿಂದ ಕಪಿಲೆ ಎಳೆಯುತ್ತಿದ್ದ ದೃಶ್ಯ. ಮಠದ ಹಿಂಡು ಹಿಂಡು ಎಮ್ಮೆಗಳು ದೊಡ್ಡದೊಡ್ಡ ನಾಲ್ಕು ಮುಸುರೆ ತೊಟ್ಟಿಗಳಲ್ಲಿ ತಮ್ಮ ದೈತ್ಯಾಕಾರದ ತಲೆಯನ್ನು ಸಂಪೂರ್ಣ ಮುಳುಗಿಸಿ ದೀರ್ಘಕಾಲದವರೆಗೆ ಉಸಿರು ಕಟ್ಟಿ ತಳದಲ್ಲಿರುತ್ತಿದ್ದ ಮುದ್ದೆಗಳನ್ನು ಹುಡುಕಿ ಜಾಲಾಡಿ ತಿನ್ನುತ್ತಿದ್ದ ದೃಶ್ಯ. ಇವೆಲ್ಲಾ ಈಗಿನ ವಿದ್ಯಾರ್ಥಿಗಳಿಗೆ ವರ್ಣಿಸಿದರೂ ಸಹ ಅವುಗಳನ್ನು ಕಲ್ಪಿಸಿಕೊಂಡು ಆಸ್ವಾದಿಸುವ ಸಾಧ್ಯತೆಯಿಲ್ಲವೆಂದೇ ನನ್ನ ಭಾವನೆ. ಈಗ ವಿಷಯಾಂತ್ರರವಾಗುವುದು ಬೇಡ. ನಮ್ಮ ಹಿಟ್ಟಿನ ಗಿರಣಿಯಲ್ಲಿನ ಕೆಲಸದ ನಿರ್ವಹಣೆಯ ಸಂದರ್ಭಕ್ಕೆ ಬರೋಣ.

ಆಗ ಮಠದ ವಿದ್ಯಾರ್ಥಿಗಳಲ್ಲಿ ಬಹುಪಾಲು ಮಂದಿ ರಜೆಗಳಲ್ಲಿ ತಮ್ಮ ತಮ್ಮ ಅ ಊರುಗಳಿಗೆ ಹೋಗಿ ರಜೆಯ ನಂತರ ಬರುವಾಗ ತಮ್ಮೊಡನೆ ತರುತ್ತಿದ್ದ ಮೆಚ್ಚಿನ ಕುರುಕು ತಿಂಡಿ ಗಳೆಂದರೆ ರಾಗಿಯ ಹುರಿಟ್ಟು, (ಹುರಿದ ರಾಗಿಯ ಹಿಟ್ಟು) ತಂಬಿಟ್ಟು, ಕೋಡಬಳೆ, ಚಕ್ಕುಲಿ ಮುಂತಾದುವು. ವಿಶೇಷ ವಾಗಿ ಹೆಚ್ಚಿನ ಪ್ರಮಾಣದಲ್ಲಿ ಅವರೆಲ್ಲಾ ತರುತ್ತಿದ್ದುದು ಹುರಿಟ್ಟು. ಇದಕ್ಕೆ ಕಾರಣ ಇದನ್ನು ತಯಾರಿಸುವುದು ಸುಲಭ. ಮಿತವ್ಯಯಕಾರಿ ಹಾಗೂ ಹೆಚ್ಚು ದಿನಗಳವರೆಗೆ ಕೆಡದಂತೆ ಇಡಬಹುದಾದ ಅನುಕೂಲ. ಸಾಧ್ಯವಾಗಿ ಎಲ್ಲರೂ ಹುರಿದ ರಾಗಿಯನ್ನೇ ಮನೆಯಿಂದ ತಂದು ಮಠದ ತಮ್ಮದೇ ಆದ ಮಿಲ್‌ನಲ್ಲೇ ಪುಕ್ಕಟೆಯಾಗಿ ಮಿಲ್ ಮಾಡಿಸಿಕೊಂಡು(ಆಗಾಗ್ಗೆ ಬೇಕಾದಷ್ಟನ್ನು ಮಾತ್ರ) ಜೊತೆಯಲ್ಲಿ ಪ್ರತ್ಯೇಕವಾಗಿ ತಂದಿರುತ್ತಿದ್ದ ಬೆಲ್ಲದಪುಡಿ, ಏಲಕ್ಕಿಪುಡಿ, ಕೊಬ್ಬರಿ ತುರಿ ಇತ್ಯಾದಿ ಬೆರೆಸಿಕೊಂಡು ಇಟ್ಟುಕೊಳ್ಳುತ್ತಿದ್ದು ರೂಢಿ. ಹೀಗಾಗಿ ತಾಯಂದಿರಿಗೆ ರಾಗಿ ಹುರಿದು ಕೊಡು ವುದಷ್ಟೇ ಸುಲಭದ ಕೆಲಸವಾಗಿತ್ತು. ಗೆಳೆಯರು ತರುತ್ತಿದ್ದ ಹುರಿದ ರಾಗಿಯನ್ನು ಹಿಟ್ಟು ಮಾಡಿಕೊಟ್ಟಿದ್ದಕ್ಕಾಗಿ ಅವರಿಂದ ಯಾವುದೇ ಹಣ ಪಡೆಯದಿರಲು ಶ್ರೀ ಶ್ರೀಗಳವರ ಅಪ್ಪಣೆಯಾಗಿತ್ತು. ಮಠದಲ್ಲಿ ನನಗಿಂತ ಸೀನಿಯರ್ ಆಗಿದ್ದ ಗೆಳೆಯ ಆರ್.ವೀರಣ್ಣ ಗಿರಣಿಯನ್ನು ಚಾಲೂ ಮಾಡುವ ಹಾಗೂ ನಿಲ್ಲಿಸುವ

* ನಿವೃತ್ತ ಮುಖ್ಯಶಿಕ್ಷಕರು, ಕೆಂಕೆರೆಪಾಳ್ಯ, ಸುಗ್ಗನಹಳ್ಳಿ ಅಂಚೆ, ಮಾಗಡಿ ತಾ॥, ರಾಮನಗರ ಜಿಲ್ಲೆ.

ಇದು ಮೊದಲ ಕಂತು. ಇನ್ನು ಹಲವು ಕಂತುಗಳನ್ನು ನೀಡಬೇಕೆನ್ನುವ ಸಂಕಲ್ಪವಿದೆ– ಸ್ವೀಕರಿಸಿದ ಮಹಾತ್ಮನ ದೃಷ್ಟಿಯಲ್ಲಿ ಮಾತ್ರ ಮೊದಲಿನಂತೆಯೇ ಮಂದಹಾಸ– ಮುಗುಳ್ನಗೆ 'ಹೋಗಿ ಪ್ರಸಾದ ಮಾಡಿ'.

ಕರ್ಣಾಕರ್ಣಿಕೆಯಾಗಿ ಈ ಮಹಾತ್ಮನ ಮಹತ್ತು – ಪ್ರಭಾವ ನಾಡಿನ ಮೂಲೆ ಮೂಲೆಗಳಿಗೆ ವಾಯುವೇಗದಲ್ಲಿ ಪ್ರಸಾರ. ಮತ್ತೊಬ್ಬ ಭಕ್ತರು– ಅದೇ ಮೊದಲ ಸಲ ದರ್ಶನಕ್ಕೆ ಬಂದರು ಜೊತೆಯಲ್ಲಿ ಚೆಕ್ ಪುಸ್ತಕದೊಂದಿಗೆ ಆಗಮನ. ಫಲ–ಪುಷ್ಪಗಳೊಂದಿಗೆ ಮೊದಲ ಸಲ ದರ್ಶನ. ಕೇವಲ ಕಣ್ಣಿನ ಮೂಲಕವೇ ಮೊದಲ ದಿನ ಸಂಭಾಷಣೆ ನಡೆದು ಹೋಯಿತು. ಒಂದೂ ಮಾತಿಲ್ಲ. ಬಂದ ಭಕ್ತರ ಅಜಾನು ಬಾಹು– ಆಕರ್ಷಕ ವ್ಯಕ್ತಿತ್ವ ಸಂತರನ್ನೂ ಬೆರೆಗುಗೊಳಿಸಿರ ಬೇಕು. ಎಂದೂ ಶ್ರೀಮಠವನ್ನು ನೋಡಿರದ– ಸಂತರ ನೇರ ದರ್ಶನವನ್ನು ಮಾಡಿರದ ಆ ಸದ್ಭಕ್ತರ ಹೃದಯ ಲ್ಲುಂಟಾದ ಪರಿಣಾಮವೆಂತಹುದೊ! ಆಗಲೇ ಚೆಕ್ ಪುಸ್ತಕ ವನ್ನು ಹೊರತೆಗೆದರು– 'ಬರೆಯಿರಿ ಎರಡು ಲಕ್ಷ'. ಸರಿ ಮುಂದಿನ ವಿಚಾರ ಅತ್ಯಾಶ್ಚರ್ಯಕರವಾದುದು– ಹದಿನೈದು ದಿವಗಳಾದ ಮೇಲೆ ಮತ್ತೆ ಆಗಮನ – ಈಗಲೂ ಎರಡು ಲಕ್ಷ ಕೊಟ್ಟಿರಬಹುದೆಂದು ನಿಮ್ಮ ಊಹೆಯೇ? ಉಹುಂ ಈಗ ಐದು ಲಕ್ಷ! ಮತ್ತೆ ತಿಂಗಳೊಪ್ಪತ್ತಿನಲ್ಲಿ ಆಗಮನ ಈಗ ಎಷ್ಟಿರಬಹುದು? ಹತ್ತು ಲಕ್ಷ!. ಆ ಭಕ್ತರಿಗೆ ಸಂಪೂರ್ಣ ಸಮಾಧಾನವಾಗಿರಬಹುದೆಂದು ತಿಳಿದರೆ ತಪ್ಪಾದೀತು. ತಮ್ಮ ಮನೆಗೇ ಆಹ್ವಾನಿಸಿದರು. ಶಿವಪೂಜೆ ಮಾಡಿಸಿದರು! ಕಾಣಿಕೆಯಾಗಿ ಮತ್ತೆ ಐದು ಲಕ್ಷ! ಈಗಲಾದರೂ ಸಮಾಧಾನ ವಾಗಿರಬಹುದಲ್ಲವೆ? ಖಂಡಿತಾ ಇಲ್ಲ. ಶ್ರೀಮಠದಕ್ಕೊಂದು ಯಾತ್ರಿಕರ ಸಲುವಾಗಿ ಸುಸಜ್ಜಿತ ಪ್ರಸಾದ ನಿಲಯದ ಅವಶ್ಯಕತೆಯಿರುವುದು ಹೇಗೆ ಅವರ ಗಮನಕ್ಕೆ ಬಂದಿತೊ– ನಿರ್ಮಾಣವಾಗಲಿರುವ ಪ್ರಸಾದ ನಿಲಯಕ್ಕೆ ಒಂದು ಕೋಟಿ ರೂಪಾಯಿಗಳ ವಾಗ್ದಾನ– ಹಾಗಾದರೆ ಆ ಭಕ್ತ ಸ್ವಾಮಿಗಳ ಪರಮ ಶಿಷ್ಯರಲ್ಲಿ ಒಬ್ಬರೇ? ಅಥವಾ ಆ ಶರಣರು ಜನಿಸಿದ ಜಾತಿಯಿಂದ ಬಂದವರೇ? ಅಲ್ಲವೇ ಅಲ್ಲ! ಹೌದು ಶರಣರಿಗೆ–ಸಂತರಿಗೆ ಜಾತಿಯೆಲ್ಲಿದೆ? ಹಾಗೆ ಭಕ್ತರೂ ಜಾತಿಯ ಮಿತಿಯನ್ನು ಮೀರಿದವರು.

ಮೇಲಿನವು ಒಂದೆರೆಡು ಉದಾಹರಣೆಗಳಷ್ಟೆ ಇಂತಹ ಮಹಾದ್ಭುತ ಪ್ರತಿದಿನವೂ ಘಟಿಸುತ್ತಲೇ ಇವೆ.

ದೂರದ ಚೆನ್ನೈ ನಗರದಿಂದ ಪ್ರಸಿದ್ಧ ಕಂಪನಿ ಯೊಂದರ ಉನ್ನತಾಧಿಕಾರಿ. ದೂರದರ್ಶನದಲ್ಲಿ ಶ್ರೀ ಗುರು ವಿನ ದರ್ಶನ. ಮನಸ್ಸಿನಲ್ಲಿ ಏನು ಪರಿಣಾಮವೊ! ನಲವತ್ತರ ಹರೆಯದ ಉನ್ನತಾಧಿಕಾರಿ ಮಹಾವಿದ್ವಾಂಸ–ವೇದ ಪಾರಂಗತ; ಸ್ವತಃ ವೇದಗಳ ಮೇಲೆ ಗ್ರಂಥಗಳನ್ನು ರಚಿಸಿದವರು. ತನ್ನ ಸಾಧ್ವಿ ಪತ್ನಿಯೊಂದಿಗೆ ಆಗಮನ! ನಾನು ನೋಡಿದ ಮೊಟ್ಟ ಮೊದಲ ಆಶ್ಚರ್ಯಕರ ಘಟನೆ– ಫಲಪುಷ್ಪಗಳ ರಾಶಿ ! ವಿವಿಧ ಪರಿಕರಗಳು. ಎಂದೂ ಶ್ರೀಮಠವನ್ನು ನೋಡಿರದ ಸೇವೆಯ ಪರಿಚಯವಿರದ ಈ ದ್ರಷ್ಟಾರ ತನ್ನ ಕೈಚೀಲದಿಂದ ಅಷ್ಟೂ ಹಣವನ್ನು ಶ್ರೀಗಳ ಸೇವೆಗೆ ಅರ್ಪಿಸಿದರು! ಕೃತಾರ್ಥರಾದರು.

ಅದೇನೊ ಸರಿ ಆದರೆ ನಮ್ಮದೇನು ಕೊಡುಗೆ? ಹಲವರು ನೀಡಿದ ದಾನದಿಂದ ವಿದ್ಯೆ–ಬುದ್ಧಿ ಕಲಿತ ನಾವು ವೈದ್ಯರಾಗಿ, ಇಂಜಿನಿಯರಾಗಿ, ಅಧಿಕಾರಿಗಳಾಗಿ, ಶಿಕ್ಷಕರಾಗಿ, ಹೀಗೆ ಹತ್ತು ಹಲವು ಉದ್ಯೋಗಗಳಲ್ಲಿ ತೊಡಗಿಸಿ ಕೊಂಡಿರುವ ನಾವು ಮಾಡಿರುವುದಾದರೂ ಏನು? ಮುಂದಿನ ಪೀಳಿಗೆ ವಿದ್ಯಾವಂತರಾಗಿ ಸುಸಂಸ್ಕೃತರಾಗ ಲೆಂದು ಭವ್ಯನಾಡಿನ ನಿರ್ಮಾಣದಲ್ಲಿ ಹಗಲಿರುಳೂ, ಈ ಅಪರ ವಯಸ್ಸಿನಲ್ಲಿಯೂ ದುಡಿಯುತ್ತಿರುವದೇವ–ಸಂತರ ಮಂಗಳ ಕಾರ್ಯದಲ್ಲಿ ನಾವೂ ಪಾಲ್ಗೊಳ್ಳಬೇಡವೇ? ಹಣದ ರೂಪದಲ್ಲಿ–ವಸ್ತುವಿನರೂಪದಲ್ಲಿ–ಸೇವಾ ರೂಪದಲ್ಲಿ– ಹೀಗೆ ಯಾವುದಾದರೊಂದು ರೂಪದಲ್ಲಿ ತೊಡಗಿಸಿ ಕೊಂಡರೆ ಬಹುಶಃ ಋಣತ್ರಯಗಳಿಂದ ಮುಕ್ತವಾಗಬಹುದೇನೋ. ಮಹಾಭಾರತದ ಕರ್ಣ 'ಮರಣದ ಹೊತ್ತು ಕೃಷ್ಣನ ಕಾಬಸುಕೃತಫಲ' ಎಂದು ತನ್ನ ಅಂತ್ಯಕಾಲದಲ್ಲಿ ಶ್ರೀ ಕೃಷ್ಣನ ವಿಶ್ವರೂಪವನ್ನು ಕುರಿತು ಹೇಳುತ್ತಾನೆ. ಕರ್ಣನಿಗಾದರೊ ಕೃಷ್ಣನು ವಿಶ್ವರೂಪದರ್ಶನ ತೋರಿಸಿದ್ದು ಅವನ ಮರಣಕಾಲದಲ್ಲಿ. ಆದರೆ ನಮಗೆ? ಪ್ರತಿನಿತ್ಯವೂ ವಿಶ್ವರೂಪ ದರ್ಶನ– ಶಿವದರ್ಶನ! ಕರ್ಣನಿಗಿಂತ ಹೆಚ್ಚು ಭಾಗ್ಯಶಾಲಿಗಳು ನಾವೇ ಅಲ್ಲವೆ? ಹಾಗಾದರೆ ಕರ್ಣನು ತನ್ನ ಸ್ವಾಮಿಗೆ ಸೇವೆ ಮಾಡಿದಂತೆ ನಾವೇನು ಮಾಡಿದ್ದೇವೆ?. ❖





## ಆರೋಗ್ಯಾಭ್ಯಾಸಗಳು

–ಡಾ॥ ರಾಜಶೇಖರ ಜಮದಂಡಿ *

ಮೊದಲಿಗೆ ಆರೋಗ್ಯವೆಂದರೇನೆಂದರೆ; ರೋಗವಿಲ್ಲ ದಿರುವುದು, ಸುಸ್ಥಿತಿಯಲ್ಲಿರುವುದು, ಆಹ್ಲಾದಕರವಾಗಿರುವುದು, ಸಂತೃಪ್ತಿಯಾಗಿರುವುದು ಎಂದೆಲ್ಲಾ ಹೇಳಬಹುದು. ದೇಹ ವನ್ನು ಸಮಗ್ರ ಕಾಲಮಾನಕ್ಕೆ ತಕ್ಕಂತೆ ಎಲ್ಲಾ ರೀತಿ–ನೀತಿ ಗಳಿಂದ ಶಿಸ್ತುಬದ್ಧವಾಗಿ, ಸ್ವಚ್ಛಂಧವಾಗಿಟ್ಟುಕೊಂಡಾಗ ಮನಸ್ಸು ಸದಾ ಉತ್ಸಾಹದಲ್ಲಿರುತ್ತದೆ. ದೇಹವನ್ನು ಬರೀ ವ್ಯಾಯಾಮ ಯೋಗಾಭ್ಯಾಸಗಳಿಂದ ಬಹಿರಂಗವಾಗಿ ಸದೃಢವಾಗಿಟ್ಟುಕೊಂಡರಷ್ಟೇ ಸಾಲದು, ಅಂತರಂಗವನ್ನು ಕೂಡ. ಇದಕ್ಕಾಗಿ ಒಳ್ಳೆಯ ಪರಿಸರ, ಆಧ್ಯಾತ್ಮ ಮತ್ತು ಸತ್ಸಂಗಗಳೂ ತುಂಬಾ ಅತ್ಯವಶ್ಯಕ. ಅಲ್ಲದೆ ಬಸವಣ್ಣನವರು ಹೇಳಿದಂತೆ; ಜೀವನದಲ್ಲಿ ಪರರನ್ನು ಹಿಂಸಿಸುವುದು, ಪರರ ವಸ್ತುಗಳನ್ನು ಕದಿಯುವುದು, ಪರರ ಕಾರ್ಯಕ್ಕೆ ಅಡ್ಡಿ ಯನ್ನೊಡ್ಡುವುದು, ಹುಸಿಯ ನುಡಿಯುವುದು, ಇವೆಲ್ಲಾ ಹತೋಟಿಯಲ್ಲಿಟ್ಟುಕೊಂಡಾಗ ಅಂತರಂಗ ಮತ್ತು ಬಹಿರಂಗಗಳು ಶುದ್ಧಿಯಲ್ಲಿರುವುದು ಸಾಧ್ಯ.

'ಆರೋಗ್ಯವೇ ಮಹಾಭಾಗ್ಯ' ಆರೋಗ್ಯವಂತರ ದೇಹವು ಆತ್ಮನಿಗೆ ಅತಿಥಿಗೃಹ, ಅನಾರೋಗ್ಯವಂತನದು ಸೆರೆಮನೆ. ಆಲಸ್ಯತನದಿಂದ ದೇಹ ಮತ್ತು ಮನಸ್ಸುಗಳು ಕುಗ್ಗುತ್ತವೆ. ಹಾಗಾಗಿ ಆಸಕ್ತಿಯನ್ನು ಬೆಳೆಯಿಸಿಕೊಂಡು ಆಶಾವಾದಿತನದಿಂದ ಬಾಳಬೇಕು. 'ಎದುರಿಸಲೆ ಬಂದು ದನ್ನು ಬಂದನಂತೆ, ಮುದುರಿದರೆ ಸಾಯುವಿಯೋ ಹುಳು ವಿನಂತೆ' ಎಂದು ಹಿರಿಯರು ಹೇಳಿದ್ದಾರೆ. ಹಸುಗಳು ತಿನ್ನುತ್ತವೆಂದು ಯಾರೂ ಭತ್ತವನ್ನು ಬೆಳೆಯದೇ ಇರಲಾರರು. ಭಿಕ್ಷಕರು ಬೇಡುತ್ತಾರೆಂದು ಭಾವಿಸಿ ಯಾರೂ ಅಡಿಗೆ ಮಾಡದಿರುವುದಿಲ್ಲ. ತೊಂದರೆಯಿದೆ ಎಂದು ಯಾರೂ ಸುಖವನ್ನು ತ್ಯಜಿಸಲಾರರು. ಅದೇ ರೀತಿ ತಾರುಣ್ಯವನ್ನು ಮುಪ್ಪು ಕಬಳಿಸುವುದೆಂದೋ, ಜೀವನವನ್ನು ಮರಣ ನುಂಗಿ ಬಿಡುವುದೆಂದೋ ಹೆದರಿ ಚಿಂತಿಸುತ್ತಾ ದಿನಗಳೆದರೆ ಅನಾರೋಗ್ಯ ಆವರಿಸಿ ಬಹುಬೇಗ ನಮಗೆ ನಾವೇ ಅಧರ್ಮಿಗಳಾಗುತ್ತೇವೆ.

ದಾರದ ಕೊನೆಯಲ್ಲಿ ಒಂದೆರೆಡು ಜುಂಗುಗಳು ಹೊರಟುಕೊಂಡಿದ್ದರೂ ಅದು ಎಂದಿಗೂ ಸೂಜಿಯ ಕಣ್ಣಲ್ಲಿ ಹೇಗೆ ತೂರಲಾರದೋ, ಹೇಗೆ ಒದ್ದೆ ಬಟ್ಟೆಯ ಎಲ್ಲಾ ಕಡೆಯಿಂದಲೂ ಹೊತ್ತು ಬಂದ ಧೂಳನ್ನು ಸ್ವೀಕರಿಸು ವುದೋ ಹಾಗೆಯೇ ಮನಸ್ಸಿನಲ್ಲಿ ಸ್ವಲ್ಪ ಸೋಮಾರಿತನ ಅಥವಾ ಅಜ್ಞಾನ ಸೇರಿಕೊಂಡರೆ ದೇಹವೂ ಸಹ ಇಂಚಿಂಚೂ ಕ್ಷೀಣವಾಗುತ್ತದೆ. ಜೀವನದಲ್ಲಿ ಆಸೆಗಳಿರಬೇಕೇ ಹೊರತು ನಿರಾಶೆಗಳಿರಬಾರದು ಮತ್ತು ದೂರಾಸೆಗಳಿರ ಬೇಕೇ ಹೊರತು ದುರಾಸೆಗಳಿರಬಾರದು.

ಜೀವನದಲ್ಲಿ ಏನೂ ಸಂಪಾದನೆ ಮಾಡದಿದ್ದರೂ ಪರ್ವಾಗಿಲ್ಲ ಮುಖ್ಯವಾಗಿ ಆರೋಗ್ಯ ಸಂಪಾದನೆ ಮಾಡಿದರೆ ಮತ್ತೆ ಏನೆಲ್ಲವನ್ನೂ ಪಡೆಯಬಹುದೆಂಬ ಮಹತ್ವದ ಆಲೋಚನೆ ಪ್ರಾಚೀನ ಕಾಲದಿಂದಲೂ ಬಂದಿದೆ. ಬದುಕಿನಲ್ಲಿ ಏನೆಲ್ಲಾ ಸಾಧಿಸಬೇಕಾದರೂ ಆರೋಗ್ಯಪೂರ್ಣ ಮನಸ್ಸಿದ್ದಾಗ ಮಾತ್ರ. ಹಿಂದೀ ಭಾಷೆಯಲ್ಲಿ ಒಂದು ಹೇಳಿಕೆ ಯಿದೆ ಅದೆಂದರೆ 'ಜಾನ್ ಹೈ ತೊ ಜಂಹಾ ಹೈ' ಎಂದು. ಇಲ್ಲಿ ಕೇವಲ ಜೀವ ಅರ್ಥವನ್ನು 'ಜಾನ್' ಶಬ್ಧಕ್ಕೆ ಕೊಡದೆ ಆರೋಗ್ಯವಾದ ದೇಹವೆಂಬುದನ್ನೇ ತೆಗೆದುಕೊಳ್ಳಬೇಕು. ಒಟ್ಟಿನಲ್ಲಿ ಆರೋಗ್ಯವಾಗಿದ್ದರೆ ಜಗತ್ತನ್ನೇ ಸುತ್ತಬಹುದು. 'ಪ್ರಸಾದ ಕಾಯವ ಕೆಡಿಸಲಾಗದು ಕೆಡಿಸಲಾಗದು' ಎಂಬ ಬಸವಣ್ಣನವರು ಹೇಳಿದಂತೆ ದೇಹವು ಪರಮಾತ್ಮನ ವಾಸಸ್ಥಾನ. ಇಂಥ ಕೊಡುಗೆಯನ್ನು ರೋಗದಿಂದ ಬಳಲ ದಂತೆ ಎಚ್ಚರವಹಿಸಬೇಕಷ್ಟೆ.

ಇನ್ನು ಆರೋಗ್ಯಾಭ್ಯಾಸಗಳೆಂದರೆ; ಒಳ್ಳೆಯ ಅಭ್ಯಾಸ ಗಳು, ನಡೆ–ನುಡಿಗಳು, ಆಚಾರ–ವಿಚಾರಗಳು, ಉತ್ತಮ ಅನಿಸಿಕೆಗಳು, ಆಹ್ಲಾದಕರ ಭಾವನೆಗಳು ಎಂದೆಲ್ಲಾ ಹೇಳಬಹುದು.

ಕೆಲವೊಂದು ಜೀವನಾರೋಗ್ಯದ ಸೂತ್ರಗಳು ಹೀಗಿವೆ; ಬೇರೆಯವರ ಅನುಕೂಲಕ್ಕಾಗಿ ತನ್ನ ಅವಶ್ಯಕತೆಗಳನ್ನು ತ್ಯಾಗ ಮಾಡುವುದು. ಆಡಂಬರವಿಲ್ಲದೆ ಸಂಯಮ–ಪ್ರೀತಿ–

* ಅಧ್ಯಾಪಕ, 'ಬಸವ' ಮನೆ ನಂ. 26/405, ಸಿದ್ಧಾರ್ಥ ಬಡಾವಣೆ, ಸೇಂಟ್ ಜೋಸೆಫ್ ಆಸ್ಪತ್ರೆ ಎದುರುಗಡೆ, ಚಾಮರಾಜನಗರ.

ಪ್ರತಿಯೊಬ್ಬರೂ ತಾವು ನಡೆದು ಬಂದ ದಾರಿಯನ್ನು ಅಂತರಂಗದಲ್ಲಿಯೇ ನಿರೀಕ್ಷೆ ಮಾಡಿಕೊಳ್ಳುವುದು ಒಳ್ಳೆಯದು.

ಸಾವಿನ ಎದುರು ಎಲ್ಲರೂ ಸಮಾನರು, ಸಾವಿನ ಮುಂದೆ ಕೆಲವರು ಹೆಚ್ಚು ಸಮಾನರು ಎಂಬ ತರತಮವಿಲ್ಲ. ಚಕ್ರವರ್ತಿ ಇರಲಿ ಸಾಮಾನ್ಯನಿರಲಿ ಅದು ಎದುರಾದಾಗ ಎಲ್ಲರೂ ಶರಣಾಗಲೇಬೇಕು. ಹುಟ್ಟಿದವರೆಲ್ಲರೂ ಒಂದಲ್ಲಾ ಒಂದು ದಿನ ಸಾಯಲೇಬೇಕು ಎಂಬುದು ವಾಸ್ತವ ಸತ್ಯ. ಸಾವನ್ನು ಕುರಿತು ಬಸವಣ್ಣನವರು 'ಇದಕಾರಂಜುವರು, ಇದಕಾರಳಕುವರು' ಎಂದಿದ್ದಾರೆ. ಇಂತಹ ಮನೋಭಾವವನ್ನು ಎಲ್ಲರೂ ಬೆಳೆಸಿಕೊಳ್ಳಬೇಕು. ಆಗ ಸಾವು ಶತ್ರುವಲ್ಲ ಮಿತ್ರನಾಗುತ್ತಾನೆ. ಯಾರಾದರೂ ನಮ್ಮ ಹತ್ತಿರದವರು ನಿಧನರಾದಾಗ ಸಾಂತ್ವನದ ಮಾತನಾಡುತ್ತೇವೆ. **'ಈ ಭೂಮಿಯ ಮೇಲೆ ಯಾರೂ ಶಾಶ್ವತರಲ್ಲ ಎಲ್ಲರೂ ಒಂದಲ್ಲ ಒಂದು ದಿನ ಸಾಯಲೇಬೇಕು'** ಎಂದು ಸಮಾಧಾನ ಹೇಳುತ್ತೇವೆ ಆದರೆ ನಾವು ಮಾತ್ರ ಈಗಲೇ ಸಾಯುವುದಿಲ್ಲ ಅಥವಾ ಸಾವು ನಮ್ಮ ಹತ್ತಿರ ಸುಳಿಯಲಾರದು ಎಂಬ ವಿಚಿತ್ರ ಸಮಾಧಾನವನ್ನು ಮನಸ್ಸಿನಲ್ಲೇ ತಾಳುತ್ತೇವೆ. ಇದು ಮನುಷ್ಯನಿಗೆ ಬದುಕಿನಲ್ಲಿರುವ ಪ್ರೀತಿಯ ಕುರುಹು ಎನ್ನಬಹುದು.

ಸಾವು ಬದುಕಿನ ವಿಸ್ಮಯ. ಇಹದ ಬದುಕಿಗೆ ಸಾವಿರ ಅರಿವು ಇದ್ದಾಗ ಸರಿ ದಾರಿಯಲ್ಲಿ ಬದುಕಲು ಪ್ರೇರಣೆ ನೀಡುತ್ತದೆ. ಸಾವಿನ ಭೀತಿ ಮನುಷ್ಯನ ಜೀವನ ದೃಷ್ಟಿಯನ್ನೇ ಬದಲಿಸುತ್ತದೆ. ಸಾವಿಗಂಜಿದವನು ಎಂದರೆ ಆತ ಸರ್ವಸಂಗ ಪರಿತ್ಯಾಗಿಯಾಗಿರಬೇಕು ಇಲ್ಲವೇ ಕೊಲೆಪಾತಕನಿರಬೇಕು ಅಷ್ಟೆ. ಸಾವಿನಾಚೆಯ ಸತ್ಯವನ್ನು ಅರಿಯುವ ಕುತೂಹಲ ಪ್ರತಿಯೊಬ್ಬರಿಗೂ ಇರುತ್ತದೆ. ಆದರೆ ಕಂಡವರಿಲ್ಲ. ಬಂದು ಹೇಳಿದವರೂ ಇಲ್ಲ ಎನ್ನುತ್ತಾರೆ ದಾರ್ಶನಿಕರು. ಈ ಜಗತ್ತನ್ನು ಸೃಷ್ಟಿಸಿದ ದೇವರನ್ನು ಕಂಡವರಿಲ್ಲ ಎಂಬಂತೆ ಇದೂ ಸಹ ವಿಸ್ಮಯವೇ! ಸಾವಿನ ಅಂಜಿಕೆಯೇ ದೇವರು, ಧರ್ಮದ ಹುಟ್ಟಿಗೆ ಕಾರಣ ಎಂಬ ಮಾತಿದೆ. ದೇವರು ಧರ್ಮವನ್ನು ನಂಬದ ನಾಸ್ತಿಕರೂ ಇದ್ದಾರೆ ಪ್ರಕೃತಿಯಲ್ಲಿರುವ ಜೀವರಾಶಿಗಳೆಲ್ಲವೂ ಗಂಡು ಹೆಣ್ಣಿನ ಮಿಲನದಿಂದಲೇ ಜೀವ ತಳೆಯುತ್ತವೆ ಎಂಬುದು ವಾಸ್ತವ ಸತ್ಯ. ಸತ್ತಮೇಲೆ ಏನಾಗುತ್ತೇವೆ ತಿಳಿಯದು. ವಾಸ್ತವವೆಂದರೆ ಒಂದೋ ಭೂಮಿಯ ೩ ಅಡಿ ಕೆಳಗೆ ಮಣ್ಣಾಗುತ್ತೇವೆ ಇಲ್ಲವೇ ಭೂಮಿಯ ೩ ಅಡಿ ಮೇಲೆ ಬೆಂಕಿಗೆ ಆಹುತಿಯಾಗುತ್ತೇವೆ. ಆದರೆ ಹುಟ್ಟಿನಿಂದ ಸಾವಿನವರೆಗೆ ನಮ್ಮನ್ನು ಕ್ರಿಯಾಶೀಲವಾಗಿರಿಸಿದ ಚೈತನ್ಯ ಯಾವುದು? ಅದು ಎಲ್ಲಿಗೆ ಹೋಯಿತು? ಎಂಬುದು ಪ್ರಶ್ನೆ. ಸಾವು ಎಂದರೇನು? ಒಬ್ಬ ವ್ಯಕ್ತಿ ಸತ್ತಿದ್ದಾನೆಂದು ನಿರ್ಧರಿಸುವುದು ಹೇಗೆ? ಆಧುನಿಕ ವೈದ್ಯರ ಪ್ರಕಾರ ಹೃದಯ ಕ್ರಿಯೆ ನಿಂತಿದೆ ಅಥವಾ ಮೆದುಳು ನಿಷ್ಕ್ರಿಯವಾಗಿದೆ, ನಾಡಿ ಆಡುತ್ತಿಲ್ಲ, ಉಸಿರಾಟ ನಿಂತಿದೆ ಎಂಬುದು ಸಾವಿನ ಕುರಿತ ವ್ಯಾಖ್ಯಾನ. ಮನುಷ್ಯನ ಶರೀರ ಒಂದು ಬಾಡಿಗೆ ಮನೆ, 'ಅಲ್ಲಿದೆ ನನ್ನ ಮನೆ, ಇಲ್ಲಿಗೆ ಬಂದೆ ಸುಮ್ಮನೆ' ಎಂಬ ಕವಿವಾಣಿ ಇದೆ. ಮನೆ ಮಾಲೀಕ ಮನೆ ಬಿಡು ಎಂದಾಗ ಬಿಡಲೇಬೇಕು. ಈ ದೇಹದ ಮೇಲಿನ ಹಕ್ಕು ನಿಜವಾದ ಮಾಲೀಕನದು. ಇಲ್ಲಿ ಮಾಲೀಕ ಎಂದರೆ ಸೃಷ್ಟಿಕರ್ತನಾದ ದೇವರು ಎನ್ನಿ, ಪ್ರಕೃತಿಮನೆ ಮಾಲೀಕ ಯಾರು ಗೊತ್ತಿಲ್ಲ ಇದು ನನ್ನದೇ ಮನೆ ಎಂಬ ವಿತಂಡವಾದಿಗಳೂ ಇದ್ದಾರೆ. ಅದೇನೇ ಇರಲಿ ಮನುಷ್ಯ ಸತ್ತಮೇಲೆ ತಾನು ಮಾಡಿದ ಪುಣ್ಯ ಪಾಪಗಳಿಗೆ ಅನುಸಾರವಾಗಿ ಸ್ವರ್ಗಕ್ಕೋ ನರಕಕ್ಕೋ ಹೋಗುತ್ತಾನೆಂಬುದು ಒಂದು ಬಲವಾದ ನಂಬಿಕೆ. ಈ ನಂಬಿಕೆಯಲ್ಲಿ ಯಾವುದೇ ಹುರುಳಿಲ್ಲ. ಸಾವು ಸಾವೇ ಅದರಾಚೆ ಏನಿದೆ? ಏನಿಲ್ಲ? ಎಂಬುದು ಬದುಕಿರುವ ಮನುಷ್ಯನ ನಂಬಿಕೆ ಎನ್ನಿ, ಪಲಾಯನವಾದ ಎನ್ನಿ, ಬದುಕು ಅನಿಶ್ಚಿತ ಸಾವು ನಿಶ್ಚಿತ ಎಂಬುದು ಮಾತ್ರ ಸತ್ಯ, ಸಾವು ಮಿತ್ರನೋ? ಶತ್ರುವೋ? ಎಂಬುದೂ ಬದುಕಿರುವ ಮನುಷ್ಯನ ಮನಸ್ಥಿತಿ ಮಾತ್ರ.



ಜೀವನ ಒಂದು ಕ್ರಿಯಾಕ್ಷೇತ್ರ, ಇಲ್ಲಿ ಕರ್ಮಶೀಲರಾಗಿ ಬದುಕುವುದು ಮುಖ್ಯ. ದುಡಿಮೆಗೆ ಇಲ್ಲಿ ಪ್ರಾಮುಖ್ಯತೆ. ದುಡಿಮೆ ಸತ್ಯಶುದ್ಧವಾಗಿರಬೇಕು. ಕಾಯಕ ಬದ್ಧವಾಗಿ ಬದುಕುವುದು ಇಲ್ಲಿ ಸಲ್ಲುವ ಜೀವನ ವಿಧಾನ. ಕಾಯಕಜೀವಿ ಆಧ್ಯಾತ್ಮಜೀವಿಯೂ ಆಗಿರುತ್ತಾನೆ. ಏಕೆಂದರೆ ಕಾಯಕ ಕೇವಲ ಸ್ವಾರ್ಥಕ್ಕಾಗಿ ದುಡಿಯುವ ಮಾರ್ಗವಲ್ಲ; ಲೋಕಹಿತಕ್ಕಾಗಿಯೂ ದುಡಿಯುವುದಾಗಿರುತ್ತದೆ.

–ಶ್ರೀವಾಣಿ







# ಒಂದು ಊಟಕ್ಕೆ ಒಂದು ಲಕ್ಷ ರೂ ಒಂದು ನೋಟಕ್ಕೆ ಅದಕ್ಕೂ ಮಿಗಿಲು

–ರೇಣುಕಾರಾಧ್ಯ ಎಸ್. *

ಜಗತ್ತಿನ ಯಾವ ದೇಶದ ಸ್ಟಾರ್ ಹೋಟೆಲ್‌ನಲ್ಲಿಯೂ ಒಂದು ಊಟಕ್ಕೆ ಲಕ್ಷ ಬೆಲೆ ಇಲ್ಲ ಎಂಬುದು ನಿಮ್ಮ ಅಚ್ಚರಿಯೆ? ಹೌದು ಇದು ಸತ್ಯ. ಹಾಗೆಯೇ ಒಂದು ನೋಟಕ್ಕೆ ಹಲವು ಲಕ್ಷ ! ಜಗತ್ತಿನ ಇತಿಹಾಸದಲ್ಲಿ ಹಲವು ದೇಶಗಳಲ್ಲಿ ಹಲವು ಅದ್ಭುತಗಳು. ಅಮೆರಿಕಾದಲ್ಲಿ ಡಿಸ್ನಿಲ್ಯಾಂಡ್, ಫ್ರಾನ್ಸ್‌ನಲ್ಲಿ ವರ್ಸೆಲ್ಸ್ ಅರಮನೆ, ಚೈನಾದಲ್ಲಿ ಶಾಂಘಾಯ್ ನಗರದ ಮೇಲುರಸ್ತೆಗಳು ಇತ್ಯಾದಿ. ಇಂತಹ ಯಾವ ಅದ್ಭುತಗಳೂ ಭಾರತದಲ್ಲಿ ಇಲ್ಲದಿರಬಹುದು. ಆದರೆ ಮೇಲೆ ಉದಾಹರಿಸಿದ ಅದ್ಭುತಗಳು ಕೇವಲ ಶ್ರೀಮಂತ ಪ್ರವಾಸಿಗರ ಮನದಣಿಸಬಲ್ಲವಾಗಿರಬಹುದು. ಅವೆಲ್ಲವನ್ನೂ ಮೀರಿಸುವ ಅವೆಲ್ಲವುಗಳಿಗೂ ಭಿನ್ನವಾದ ಒಂದು ಮಹಾದ್ಭುತ ಉಂಟು ಅದು ಭಾರತದಲ್ಲಿ– ವಿಶೇಷವಾಗಿ ಕರ್ನಾಟಕದಲ್ಲಿ.

ಮಾನವನಿಗೆ ಮೂಲಭೂತವಾಗಿ ಬೇಕಾಗಿರುವುದು ಅನ್ನ, ಅರಿವೆ, ವಸತಿ, ವಿದ್ಯೆ– ಉಳಿದವುಗಳು ಈ ಮೇಲಿನವುಗಳನ್ನು ಅವಲಂಬಿಸಿವೆ. ಇಡೀ ಮನುಕುಲದ ಎಲ್ಲಾ ವರ್ಗದವರಿಗೂ ಅದರಲ್ಲೂ ಆರ್ಥಿಕ ರೇಖೆಯ ಕೆಳಹಂತದವರಿಗೆ ವಿದ್ಯೆಯನ್ನು ಕಲಿಸುವ ಸಲುವಾಗಿ ಮತ್ತು ಅದಕ್ಕೆ ಪೂರಕವಾಗಿ ಅನ್ನ ಮತ್ತು ವಸತಿ ವ್ಯವಸ್ಥೆಯನ್ನು ಕಲ್ಪಿಸುವ ಸಲುವಾಗಿ ಸರ್ವಸಂಗ ಪರಿತ್ಯಾಗಿ – ಸಂನ್ಯಾಸಿಯೊಬ್ಬ ತನ್ನ ಒಂದು ನೂರಾ ನಾಲ್ಕನೇ ವಯಸ್ಸಿನಲ್ಲಿಯೂ ದಿನದ ೧೬–೧೮ಗಂಟೆಗಳು ಸಾರ್ವಜನಿಕರಿಗಾಗಿ ದುಡಿಯುತ್ತಿರುವ ಅಚ್ಚರಿ. ಜಗತ್ತಿನ ಯಾವ ದೇಶದಲ್ಲಿಯೂ ಬಹುಶಃ ನೋಡಲು ಸಿಗದಂತಹ ದಿನಚರಿ ಈ ಸಂತರದು. ಬೆಳಿಗ್ಗೆ ೨.೩೦ಕ್ಕೆ ಆರಂಭದ ದಿನಚರಿ– ಸ್ವತಃ ತಾವೇ ಅಗಾಧವಾದ ಜ್ಞಾನರಾಶಿಯ ಮುದ್ದೆಯಂತಿದ್ದರೂ ದಿನವೂ ಬಿಡದ ಸತತ ಅಭ್ಯಾಸದಿಂದ ಪ್ರಾರಂಭವಾಗುತ್ತದೆ ಅವರ ದಿನಚರಿ. ನೂರು ಜನ್ಮಗಳಿಗಾಗುವಷ್ಟು ತಪಸ್ಸು–ಶಿವಪೂಜೆ ಮಾಡಿದ್ದರೂ ಈಗಲೂ ಪ್ರತಿದಿನವೂ ಮೂರು ಘಂಟೆಗಳ ಮಹಾ ಶಿವಪೂಜೆ. ಪೂಜೆ–ಪ್ರಸಾದ ಮುಗಿಸಿ ಹೊರಬರುವ ಶಿವ ಯೋಗಿಯ ದಿವ್ಯದರ್ಶನ ಮಾಡಿದವರೇ ಪುಣ್ಯಪಾವನರು. ಅದೊಂದು ಅಲೌಕಿಕ ಅನುಭವ – ವಾಂಙ್ಮಯ ಮ□ಕ್ಕಗೋಚರ. ಅನುಭವಿಸಿಯೇ ಆನಂದಿಸಬೇಕು. ಈ ನೂರಾನಾಲ್ಕು ವರ್ಷಗಳ ದೀರ್ಘ ಸೇವೆಯಿಂದ ರೂಪಿತಗೊಂಡಿರುವ ಅವರ ಹದವಾದ ಬದುಕು–ಮಿತವಾದ ಮಾತು ದಶದಿಕ್ಕು ಗಳಿಂದಲೂ ಭಕ್ತರನ್ನು–ಸಾಧಕರನ್ನು–ಹಿರಿಯರನ್ನು–ಕಿರಿಯರನ್ನು–ದಾರ್ಶನಿಕರನ್ನು–ದಲಿತರನ್ನು–ಬಲಿತರನ್ನು–ಸರ್ವರನ್ನೂ ಸಮನಾಗಿಯೇ ಆಕರ್ಷಿಸುವ ದಿವ್ಯವ್ಯಕ್ತಿತ್ವ ಕೇವಲ ದರ್ಶನಾ ಶೀರ್ವಾದದಿಂದಲೇ ಪುನೀತರಾದೇವೆಂಬ ಭಾವನೆ ಸಾರ್ವಜನಿಕರದು.

ಈ ಸಂತರ ಸೇವೆಗೆ ಹತ್ತು ಹಲವು ಮುಖಗಳು, ಸಹಸ್ರ ಬಾಹುಗಳು, ಪಾದಗಳು. ಯಾರಿಗೂ ಇಲ್ಲವೆನ್ನುವ, ಎಲ್ಲರಿಗೂ ಸಮಾಧಾನಚಿತ್ತರಾಗಿ ಉತ್ತರ ಕೊಡುವ – ಅಭಯ ನೀಡುವ ಈ ಮಹಾತ್ಮನ ಪರಿ– ಪುರಾಣಗಳಲ್ಲೂ ಸಿಗದು. ವರ್ತಮಾನದಲ್ಲಿ ಕಾಣದು. 'ಹೋಗಿ ಪ್ರಸಾದ ಮಾಡಿ'– ಈ ಮಾತಿನ ಮೋಡಿಯಲ್ಲಿ ಸಿಲುಕಿದ ಭಕ್ತ ಸಮೂಹ ಪ್ರಸಾದ ಸ್ವೀಕಾರ ಮಾಡಿದ ಮೇಲೆ ಈ ರೀತಿಯ ರುಚಿಕರವಾದ, ಸ್ವಾದಿಷ್ಟವಾದ ಪ್ರಸಾದವನ್ನು(ಊಟವನ್ನು) ತಮ್ಮ ಜೀವಮಾನದಲ್ಲಿಯೇ ಮಾಡಿರಲಿಲ್ಲವೆನ್ನುವ ಉದ್ಗಾರ, ಜೊತೆಗೆ ಕೆಲವು ಪ್ರಶ್ನೆಗಳು. ಒಂದು ದಿವಸಕ್ಕೆ ಇಲ್ಲಿನ ಪ್ರಸಾದ ವ್ಯವಸ್ಥೆಗೆ ಖರ್ಚು–ವೆಚ್ಚವೆಷ್ಟು! ನಿಖರ ಲೆಕ್ಕವಿಲ್ಲದಿದ್ದರೂ ದಿನವೊಂದಕ್ಕೆ ಲಕ್ಷ ಲಕ್ಷ. ಸರಿ ಮನದಲ್ಲಿ ನಿರ್ಧರಿಸಿಬಿಟ್ಟರು ಮತ್ತೊಮ್ಮೆ ಶ್ರೀಮಠಕ್ಕೆ ಕುಟುಂಬ ಸಮೇತ ಭೇಟಿ ದರ್ಶನಾಶೀರ್ವಾದ. ಮುಂದೆ? ತಮ್ಮ ಕೈಚೀಲದಿಂದ ಲಕ್ಷ ರೂಪಾಯಿಗಳ ಕಟ್ಟನ್ನು ಹೊರ ತೆಗೆದರು. ಸ್ವಾಮಿಗಳ ಎದುರಿನ ಮೇಜಿನ ಮೇಲಿಟ್ಟು ವಿನಂತಿ ಮಾಡಿದರು.

* 8ನೇ ಅಡ್ಡರಸ್ತೆ, 1ನೇ ಮೈನ್, ಶ್ರೀನಗರ, ದೇವರಾಯಪಟ್ಟಣ ಅಂಚೆ, ತುಮಕೂರು–572 104.

ಒಬ್ಬ ಕವಿ ಈ ಬದುಕಿನ ಬಗ್ಗೆ ಬರೆದ ಕವಿತೆ ಹೀಗಿದೆ,

*ನೆಮ್ಮದಿಗಾಗಿ ನಾನು ಮನೆ ಕಟ್ಟಿದೆ,*
*ಮನೆಯಲ್ಲಿ ನೆಮ್ಮದಿ ಸಿಗಲಿಲ್ಲ !*
*ಭಕ್ತಿಗೆಂದು ನಾನು ಎಲ್ಲರೊಡಗೂಡಿ*
*ಗುಡಿಯ ಕಟ್ಟಿದೆ.*
*ಭಕ್ತಿ ಗುಡಿಯಲಿ ಕಾಣಲಿಲ್ಲ!*
*ಧನ್ಯತೆಗೆಂದು ನಾನು ಸೇವೆ ಮಾಡಿದೆ,*
*ಸೇವೆಯಲ್ಲಿ ಧನ್ಯತೆ ಸಿಗಲಿಲ್ಲ !*
*ಹಗುರಾಗಲೆಂದು ನಾನು ಗೆಳೆಯರೊಡನೆ*
*ಕಲೆತೆ, ಭಾರ ಹೆಚ್ಚಾಯಿತು*
*ಕಡೆಗ ನಾನು ಏನು ಮಾಡದೇ, ಖಾಲಿಯಾದೆ!*
*ನೆಮ್ಮದಿ ತಾನಾಗಿ ಅರಸಿ ಬಂತು !*

ಮಾನವನ ಮನಸ್ಸು ಒಂದು ಮಂಗ ಎಂದು ಅನೇಕ ದಾರ್ಶನಿಕರು ವ್ಯಾಖ್ಯಾನಿಸಿದ್ದಾರೆ. ಈ ಮನಸ್ಸು ಇನ್ನೊಬ್ಬರ ಮಾತು ಮತ್ತು ಕೃತಿಗಳಿಗೆ ಥಟ್ಟನೇ ಪ್ರತಿಸ್ಪಂದಿಸಿ ಪರವಶವಾದಾಗ ಕಲಹ ಅಶಾಂತಿ ಖಂಡಿತವಲ್ಲವೇ? ಅದಾಗದೇ, ನಮ್ಮ ಮನಸ್ಸು ತಾನೇ ಸ್ವತಂತ್ರವಾಗಿದ್ದು, ಆತ್ಮಾಭಿಮುಖವಾದಾಗ, ನಾನು ಮಾನಸಿಕ ಪರಾಧೀನತೆಯನ್ನು ಕಳೆದುಕೊಂಡು ಸ್ವತಂತ್ರವಾಗುತ್ತೇನೆ ಆನಂದವನ್ನು ಅನುಭವಿಸುತ್ತೇನೆ ಎಂಬ ಅರಿವೇ ಆತ್ಮಜ್ಞಾನದ ಮೂಲ.

ನಮ್ಮ ಆಶೆ, ಬಯಕೆಗಳನ್ನು ಪೂರ್ಣಗೊಳಿಸಲು ಬದುಕೆಲ್ಲವನ್ನೂ ಮೀಸಲಾಗಿಟ್ಟವರ ಮನಸ್ಸು ಉದ್ವಿಗ್ನ ಸ್ಥಿತಿಯಲ್ಲಿರುವುದನ್ನು ನಾವು ಕಾಣುತ್ತೇವೆ. ಕೆಲವು ಆಶೆ ಬಯಕೆಗಳು ಕೈಗೂಡಿದಾಗ ಅದನ್ನೇ ಸುಖದ ಕ್ಷಣಗಳೆಂದು ಭಾವಿಸುತ್ತೇವೆ. ಅನೇಕ ಆಶೆಗಳು ಪೂರ್ಣಗೊಳ್ಳದೇ ಇದ್ದಾಗ, ಬದುಕೆಲ್ಲಾ ಹೋರಾಟವಾಗುತ್ತದೆ. ಗಂಡ, ಹೆಂಡತಿ, ಮಕ್ಕಳು, ಸಂಪತ್ತು, ಮನೆ, ಬಂಧುಬಳಗ ಹೀಗೆ ನಾವು ಬಯಸಿದ್ದೆಲ್ಲಾ ಸಿಕ್ಕಿತು ಎಂದಾಗಲಾದರೂ ತೃಪ್ತಿ, ನೆಮ್ಮದಿ ಸಿಕ್ಕಿದಿಯೇ? ಸಿಕ್ಕೀತೇ?

ಬದುಕಿನಲ್ಲಿ ಅನೇಕರು ಸಾಕಷ್ಟು ಜನ, ಧನ ಕನಕಗಳನ್ನು ಪಡೆದಿರುತ್ತಾರೆ. ವಿದೇಶಗಳಲ್ಲಿಯೂ ಸಾಕಷ್ಟು ಹೆಸರು ಕೀರ್ತಿಗಳಿಸಿರುತ್ತಾರೆ. ಶೀಲ ಸದಾಚಾರಗಳಲ್ಲಿಯೂ ನನ್ನನ್ನು ಬಿಟ್ಟರೆ, ಇಲ್ಲದೆನ್ನುವಷ್ಟು ಆಚಾರ ಸಂಪನ್ನ ರಾಗಿರುವುದನ್ನು ಕಾಣುತ್ತೇವೆ. ಆದರೆ ಅವರಿಗೆ ತೃಪ್ತಿ, ನೆಮ್ಮದಿ ಗಗನ ಕುಸುಮವಾಗಿರುವುದು ಒಂದು ವಿಪರ್ಯಾಸವೇ ಸರಿ.

ಪಂಚಭೂತಗಳಿಂದಾದ ಮಾನವ ದೇಹ ಇದರಲ್ಲಿರುವ ಇಂದ್ರಿಯಗಳು, ಅವುಗಳ ಹಿಂದೆ ಇರುವ ಸೂಕ್ಷ್ಮವಾಗಿರುವ ಮನಸ್ಸು ಬುದ್ಧಿಗಳು ಇದೇ 'ನಾನು' ಎಂದು ಭಾವಿಸುತ್ತೇನೆ. 'ನಾನು' ಪ್ರಾಣ, ಪಂಚಕೋಶ, ಪಂಚಕರ್ಮೇಂದ್ರಿಯ ಎಂದು ಭಾವಿಸಿ ಬವಣೆ ಪಡುತ್ತೇವೆ. ಹಾಗೆಂದು ತಿಳಿದಾಗಲೇ 'ನಾನು' ಎಲ್ಲಾ ಭಾವವಿಕಾರಗಳಿಗೆ, ರಾಗದ್ವೇಷಗಳಿಗೆ ಒಳಗಾಗುತ್ತದೆ, ಪಾಪ ಪುಣ್ಯಗಳಿಗೆ ಒಳಗಾಗುತ್ತದೆ. ಇದಲ್ಲವನ್ನೂ ಮೀರಿ 'ನಾನು' ಎನ್ನುವುದು ಆನಂದ ಸ್ವರೂಪ, ಮಂಗಳಮಯವಾದ ಶುದ್ಧ ಅರಿವು ಎಂದು ಭಾವಿಸಿದಾಗ, ನಮಗೆ ಸಚ್ಚಿದಾನಂದ ಸ್ವರೂಪನಾದ ಸದಾಶಿವನ ಭಾವನೆಯ ಮೂಲಕ ಆತ್ಮಜ್ಞಾನವನ್ನು ನೆಮ್ಮದಿಯನ್ನು ಬದುಕಿನಲ್ಲಿ ದೊರಕಿಸಿಕೊಡುತ್ತದೆ.

ಈ ಪ್ರಪಂಚ ಈ ಬದುಕು ಕ್ಷಣಕ್ಷಣಕ್ಕೂ ಬದಲಾವಣೆ ಹೊಂದುತ್ತಿರುವುದನ್ನು 'ನಾನು' ಅನುಭವಿಸುತ್ತದೆ. ಆದರೆ ಬದಲಾಗದ್ದು ಈ ಆತ್ಮವೊಂದೇ ಎನ್ನುವ ಆತ್ಮಜ್ಞಾನವನ್ನು 'ನಾನು' ಪಡೆಯಲು ಶ್ರಮಿಸಬೇಕು. ಆಗ ಅಸ್ಥಿರವಾದ ಈ ಪ್ರಪಂಚವನ್ನು ಬಿಟ್ಟು ಸ್ಥಿರವಾದ, ಶಾಶ್ವತವಾದ ಆತ್ಮನನ್ನು 'ನಾನು' ಅನುಭವಿಸಿದಾಗ, ಅದೇ ಶಿವ, ಅದೇ ಸುಂದರ, ಅದೇ ಸತ್ಯ.

ಭಕ್ತಿಭಂಡಾರಿ ಬಸವಣ್ಣನವರು ಬಸವಣ್ಣನವರು 'ನಾನು' ಎಂಬುದಕ್ಕೆ ವಿವರಣೆಯನ್ನು ವಚನರೂಪದಲ್ಲಿ ಹೀಗೆ ಹೇಳುತ್ತಾರೆ. *'ನಾನು ಆರಂಭವ ಮಾಡುವೆನಯ್ಯಾ, ಗುರುಪೂಜೆಗೆಂದು, ನಾನು ಬೆವಹಾರವ ಮಾಡುವೆನಯ್ಯಾ, ಲಿಂಗಾರ್ಚನೆಗೆಂದು ನಾನು ಪರಸೇವೆಯ ಮಾಡುವೆನಯ್ಯಾ ಜಂಗಮದಾಸೋಹಕ್ಕೆಂದು, ನಾನು ಯಾವ ಕರ್ಮಗಳ ಮಾಡಿದಡೆಯೂ ಅಕರ್ಮಫಲ ಭೋಗವ ನೀ ಕೊಡುವೆ ಎಂಬುದ ನಾ ಬಲ್ಲೆನು, ನೀ ಕೊಟ್ಟ ದ್ರವ್ಯ ನಿಮಗಲ್ಲದೇ ಮತ್ತೊಂದು ಕ್ರಿಯೆಯ ಮಾಡೆನು, ನಿಮ್ಮ ಸೊಮ್ಮಿಂಗೆ ಸವೆಸುವನು ನಿಮ್ಮಾಣೆ, ಕೂಡಲಸಂಗಮದೇವ'.*

❖





## ಸಾವು ಮಿತ್ರನೋ! ಶತ್ರುವೋ ?

–ಜಯದೇವಪ್ಪ ಜೈನಕೇರಿ *

**ಈ** ದೇಹದಂತೆ ಈ ಮನಸ್ಸು, ಈ ಮನಸ್ಸಿನಂತೆ ಈ ದೇಹ ಎಂಬ ಮಾತಿದೆ. ನಾನು ಎಂಬುದು ದೇಹವೇ? ಮನಸ್ಸೇ? ಅಥವಾ ಆತ್ಮವೇ? ಎಂಬ ಜಿಜ್ಞಾಸೆ ಎದುರಾಗುತ್ತದೆ. ಹಾಗಾದರೆ 'ನಾನು' ಎಲ್ಲಿದ್ದೇನೆ? ಎಂಬುದು ಸಾರ್ವಕಾಲಿಕ ಪ್ರಶ್ನೆ. ಇಳಿವಯಸ್ಸಿನಲ್ಲಿ ಯಾಕೆ? ಇಂತಹ ಅನಾವಶ್ಯಕ ಆಲೋಚನೆಗಳು ಬೆನ್ನು ಹತ್ತುತ್ತವೆ. ಮನಸ್ಸು ಮಾಗಿದಂತೆ, ದೇಹ ಜೀರ್ಣವಾದಂತೆ, ಸಾವಿ ಹತ್ತಿರ ಬರುತ್ತಿದೆ ಎಂಬ ಭೀತಿಯೇ ನಮ್ಮನ್ನು ಅಂತರ್ಮುಖಿಗಳನ್ನಾಗಿಸುತ್ತದೆ. ಮನಸ್ಸಿನ ಬೇಗುದಿಗೆ ಇಷ್ಟು ಸಾಕು, ಮೈ ಬೆಚ್ಚಗಾಗುತ್ತದೆ. ಮನಸ್ಸು ಹತ್ತಿ ಉರಿಯುತ್ತದೆ. ಮನಸ್ಸನ್ನು ಹುಸಿ ನಂಬಿಕೆಗಳಿಂದ, ಕಾಣದ ದೇವರಲ್ಲಿ ಪ್ರಾರ್ಥನೆ ಸಲ್ಲಿಸುವುದರಿಂದ ಸಾಂತ್ವನಗೊಳಿಸುವ ಪ್ರಯತ್ನ ಮಾಡುತ್ತೇವೆ. ವಯಸ್ಸಾದಂತೆ, ಸಾವು ಹತ್ತಿರವಿದೆ ಎಂಬ ವಾಸ್ತವವನ್ನು ದೂರತಳ್ಳುವ ಪ್ರಯತ್ನ ಸದಾ ಮನಸ್ಸಿನಲ್ಲಿಯೇ ನಡೆದಿರುತ್ತದೆ. ಸಾವನ್ನು ಯಾರೂ ಸ್ವಾಗತಿಸುವುದಿಲ್ಲ. ಅದು ಕರೆಯದೆ ಬರುವ ಅತಿಥಿ, ಬಂದೇ ಬರುತ್ತದೆ ಎಂಬುದು ಮಾತ್ರ ಸತ್ಯ, ಯಾವಾಗ, ಎಲ್ಲಿ ಯಾವ ರೂಪದಲ್ಲಿ ಎಂಬುದು ಮಾತ್ರ ನಿಗೂಢ ! ಬದುಕಿನಲ್ಲಿ ಆಸಕ್ತಿ, ಬದುಕಿನ ಆಸೆ ಹೊಂದಿರುವವರು, ಬದುಕನ್ನು ಸಾವಿಗೆ ಒಡ್ಡಲಾರರು. ಬದುಕು ಇನ್ನೂ ಇದೆ ಎಂದರೆ ನಾನು ಬದುಕಿ ಸಾಧಿಸಬೇಕಾದ್ದು ಇನ್ನೂ ಇದೆ ಎಂಬ ಮನಸ್ಸಿಗೆ ಎಲ್ಲದರಲ್ಲೂ ಸ್ವಾರಸ್ಯವೇ. ಎಷ್ಟೋ ಮಂದಿ ನಿರಾಸೆಯಿಂದ ಆತ್ಮಹತ್ಯೆಗೆ ಎಳಸುವುದು, ಬದುಕಿನಲ್ಲಿ ಸ್ವಾರಸ್ಯ ಕಳೆದುಕೊಂಡಾಗಲೇ ಎನ್ನುತ್ತಾರೆ. ಮಾನಸಿಕ ತಜ್ಞರು.

ಸಾವು ಅದೇ ನಮ್ಮೆಡೆಗೆ ಬಂದರೂ, ನಾವೇ ಅದರೆಡೆಗೆ ನಡೆದರೂ, ಒಂದೇ, ಸಾವು, ಸಾವೇ! ಯಾವುದೇ ರೂಪದಲ್ಲಿ ಬಂದರೂ ದೇಹ ನಿಷ್ಕ್ರಿಯವಾಗುತ್ತದೆ. ಸಾವು ಮನಸ್ಸಿಗೆ ಬಂದರೂ ಅದರ ಪರಿಣಾಮ ಒಂದೇ! ಕಾಣದ ಮನಸ್ಸು, ಆತ್ಮಗಳೂ ಇಲ್ಲವಾಗುತ್ತವೆ. ಸಾವಿಗೆ ಚಿಕ್ಕವರು–ದೊಡ್ಡವರು, ಒಳ್ಳೆಯವರು–ಕೆಟ್ಟವರು ಎಂಬ ಭೇದವಿಲ್ಲ. ಚಿಕ್ಕವರ ಮುಂದೆ ದೊಡ್ಡವರು, ದೊಡ್ಡವರ ಮುಂದೆ ಚಿಕ್ಕವರು ಹೋಗುತ್ತಾರೆ. ಅದಕ್ಕೆ ಯಾರ ಪ್ರಾರ್ಥನೆಯಾಗಲಿ, ನೋವಾಗಲಿ ಕೇಳಿಸಲಾರದು. ಸಾವು, ಬದುಕಿರುವವರ ಮನಸ್ಸಿನಲ್ಲಿ ಭಯ ಮತ್ತು ವಿಚಿತ್ರ ಧೈರ್ಯವನ್ನು ಉಂಟು ಮಾಡುತ್ತದೆ. ಮೈ ಬೆವರುತ್ತದೆ, ಹೃದಯ ತಲ್ಲಣಗೊಳ್ಳುತ್ತದೆ, ಈ ಜೀವ ಇತರರ ಸಾವನ್ನೂ ಕಂಡು ಮತ್ತೇನೋ ಧೈರ್ಯ ತಳೆಯುತ್ತದೆ. ಮನಸ್ಸು ತನಗೆ ತಾನೇ ಸಾಂತ್ವನ ಹೇಳಿಕೊಳ್ಳುತ್ತದೆ. ಬದುಕಿನ ಸವಾಲು ಎದುರಿಸುವ ಶಕ್ತಿಯನ್ನು ಗಳಿಸುತ್ತದೆ. ಬದುಕನ್ನು ನಿರ್ವಿವಾದಿತವಾಗಿ, ನೆಮ್ಮದಿಯಿಂದ ಎದುರಿಸುವ ಆತ್ಮಸ್ಥೈರ್ಯವನ್ನು ಬೆಳೆಸಿಕೊಳ್ಳಬೇಕು. ಆಗ ಸಾವು ನಮ್ಮ ಮಿತ್ರ, ಯಾವಾಗ ಬೇಕಾದರೂ ಬರಲಿ, ಎಂಬ ಅರಿವು ಮೂಡಲು ಸಾಧ್ಯ. ಈ ನೆಲದ ಋಣ ಮುಗಿದ ನಂತರ ಇಲ್ಲಿ ಯಾರೂ ಇರಲಾರರು. ಸಾವು ಬಾಗಿಲು ಬಡಿದರೆ ತೆರೆಯದಿರಲು ನಮಗಾವ ಅಧಿಕಾರವೂ ಇಲ್ಲ. ಇದು ಮಾತ್ರ ಸತ್ಯ. ಇಲ್ಲಿ 'ನಾನು' ಎಂಬುದು ದೇಹವೇ? ಮನಸ್ಸೇ? ಆತ್ಮವೇ? ಹಾಗಾದರೆ ನಾನು ಎಲ್ಲಿದ್ದೇನೆ? 'ಹುಟ್ಟು ಆಕಸ್ಮಿಕ, ಸಾವಿ ನಿಶ್ಚಿತ' ಇದು ಎಲ್ಲರಿಗೂ ತಿಳಿದಿರುವ ಸತ್ಯ. ಹುಟ್ಟು ಸಾವಿನ ನಡುವಿನ ಬದುಕನ್ನು ನಾವು ಹೇಗೆ ಕಳೆದೆವು ಎಂಬ ಸತ್ಯವನ್ನು ಮೆಲುಕು ಹಾಕಬೇಕು. ನಮ್ಮ ಬದುಕಿನಲ್ಲಿ ಕಳೆದ ಸಾರ್ಥಕ ಕ್ಷಣಗಳು ಎಷ್ಟು? ವ್ಯರ್ಥವಾಗಿ ಕಳೆದದ್ದೆಷ್ಟು? ಇನ್ನೂ ಉತ್ತಮವಾಗಿ ಬದುಕಬಹುದಾಗಿತ್ತಲ್ಲ ಎಂಬ ವಿಚಾರ ಮನದಲ್ಲಿ ಸುಳಿದು ಮರೆಯಾಗುತ್ತದೆ. ಕಾಲ ಮಿಂಚಿದ ಮೇಲೆ ಏನು ತಾನೇ ಮಾಡಲು ಸಾಧ್ಯ?. ಎಂಬ ಅರಿವನ್ನು ಪ್ರತಿಯೊಬ್ಬರೂ ಹೊಂದಿರಬೇಕು. ಪರೋಪಕಾರಿಯಾಗಿ ಬದುಕಿ ಇಹದ ಬದುಕನ್ನು ಸಹ್ಯವಾಗಿಸಿಕೊಳ್ಳಬಹುದು. ಇಳಿವಯಸ್ಸಿನಲ್ಲಿ

* ನಂ. 87, 'ಶಾಂತಲಾ', ಕುವೆಂಪು ರಸ್ತೆ, ಶಿವಮೊಗ್ಗ–577 201.

ಏಕೆಂದರೆ ಅದು ಅಶಾಶ್ವತವಾದುದು. ಬೆಂಕಿಯ ಹುರಿಗೆ ಬೇಯುತ್ತದೆ, ಮಣ್ಣಿನಿಂದ ಮಾಡಿದ ಮೂರ್ತಿಗಳು ದೇವರಲ್ಲ, ಅವಾದರೂ ನೀರಿನಲ್ಲಿ ಕದಡಿಹೋಗುತ್ತದೆ. ಇದನ್ನು ತಿಳಿಯುವ ಅಥವಾ ಅರಿಯುವ ಮನಸ್ಸು ದೇವರಲ್ಲ. ಮನಸ್ಸಾದರೂ ಪಂಚೇಂದ್ರಿಯಗಳ ಮೊತ್ತವಾಗಿದೆ. ಹಾಗಾದರೆ ದೈವ ಯಾವುದು ಎಂಬುದು ಗೊಲ್ಲಾಳನ ಪ್ರಶ್ನೆಯಾಗಿದೆ. ಅದಕ್ಕೆ ಮುಂದಿನ ಭಾಗದಲ್ಲಿ ತಾನೇ ಉತ್ತರವನ್ನೂ ಕೊಟ್ಟಿದ್ದಾನೆ. ನಿಷ್ಠೆ ಅಥವಾ ವಿಶ್ವಾಸವೇ ಮುಖ್ಯವಾದುದು. ಗಂಡನ ಬಗೆಗಿನ ಹೆಂಡತಿಯ ನಿಷ್ಠೆ ಹೇಗೋ, ಹಾಗೆಯೇ ದೈವದ ಬಗೆಗಿನ ಭಕ್ತನ ನಿಷ್ಠೆ ಮುಖ್ಯವಾದುದು. ಸ್ವತಃ ಕುರುಬ ಗೊಲ್ಲಾಳನಿಗೂ ಇದ್ದದ್ದು ಇದೇ ನಿಷ್ಠೆ. ಇಂತಹ ನಿಷ್ಠೆಯಿದ್ದುದರಿಂದಲೇ ಹೂತ ಕುರಿಯ ಹಿಕ್ಕೆಯಲ್ಲಿಯೇ ದೈವವನ್ನು ಕಂಡವನು. ದಾಸಿಮಯ್ಯ ಒಂದು ವಚನದಲ್ಲಿ ಹೇಳುವಂತೆ 'ನಂಬಿ ಕರೆದಡೆ ಓ ಎನ್ನನೆ ಶಿವನು' ಎಂಬಂತೆ ನಂಬಿಕೆ ಅಥವಾ ವಿಶ್ವಾಸ, ನಿಷ್ಠೆ ಭಕ್ತನಿಗೆ ಮುಖ್ಯವಾದುದಾಗಿದೆ. ಇಂತಹ ನಿಷ್ಠೆಯೇ ಭಕ್ತನಿಗೆ ದೈವಸಾಕ್ಷಾತ್ಕಾರವನ್ನು ಮಾಡಿಸುತ್ತದೆ. ಉರಿಲಿಂಗಪೆದ್ದಿಗೆ ಅವನ ಗುರು ಉರಿಲಿಂಗದೇವ ಕೊಟ್ಟ ಒಂದು ಗುಂಡುಕಲ್ಲು ಸಾಕ್ಷಾತ್ ಲಿಂಗವಾಗುತ್ತದೆ. ವ್ಯಾಪಾರಿ ಮಲ್ಲಶೆಟ್ಟಿಗೆ ಭಗವಂತನು ಬಳ್ಳದಲ್ಲಿಯೇ ಪ್ರತ್ಯಕ್ಷನಾಗುತ್ತಾನೆ. ಪ್ರಹ್ಲಾದನಿಗೆ ಕಂಬದಲ್ಲಿಯೇ ದೈವಸಾಕ್ಷಾತ್ಕಾರವಾಗುತ್ತದೆ. ಇಲ್ಲೆಲ್ಲ ಇರುವುದು ಭಗವಂತನ ಬಗೆಗೆ ಭಕ್ತನ ನಿಷ್ಠೆಯಾಗಿದೆ. ಇಂತಹ ನಿಷ್ಠೆಯೇ ದೈವಸಾಕ್ಷಾತ್ಕಾರವನ್ನುಂಟುಮಾಡುತ್ತದೆ ಎಂಬುದನ್ನು ಗೊಲ್ಲಾಳ ತನ್ನ ವಚನದಲ್ಲಿ ಅದ್ಭುತವಾಗಿ ತಿಳಿಸಿದ್ದಾನೆ.

***ಹೋತನ ಹೊಡದು, ಆಡ ಕೂಡಿ, ಕುರಿಯ ನಿಲಿಸಿ,***
***ತಗರ ತಡದು, ಹಿಂಡನೊಬ್ಬುಳಿತೆಮಾಡಿ,***
***ಹುಲಿ ತೋಳ ಚೋರ ಭಯಮಂ ಕಳೆದು,***
***ಹಿಂಡಿಗೊಡೆಯನಾಗಿ ಕಾವ ಗೊಲ್ಲಾಳ ನೀನೆ,***
***ವೀರಬೀರೇಶ್ವರಾ.***

ಬಸವಣ್ಣನವರ ಒಂದು ವಚನದಲ್ಲಿ ವ್ಯಕ್ತವಾಗುವ ಪಶುಪತಿಭಾವವು ಕುರುಬ ಗೊಲ್ಲಾಳನ ಈ ವಚನದಲ್ಲಿಯೂ ವ್ಯಕ್ತವಾಗಿದೆ. ಮೇಲ್ನೋಟಕ್ಕೆ ಈ ವಚನವು ಕುರಿಗಳನ್ನು ಕಾಯುವ ಕುರುಬನನ್ನು ವರ್ಣಿಸಿದಂತೆ ಕಾಣಬರುತ್ತದೆ. ಆದರೆ ವಚನವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಇಡೀ ಜಗತ್ತನ್ನು ಕಾಯುವ ದೈವವನ್ನು ಸಂಕೇತಿಸುತ್ತದೆ. ಒಂದು ನೆಲೆಯಲ್ಲಿ ಗೊಲ್ಲಾಳ ತನ್ನ ಕಾಯಕ ಪರಿಭಾಷೆಯನ್ನೇ ಬಳಸಿ ಅನುಭಾವಿಕ ವಿಚಾರಗಳನ್ನು ವ್ಯಕ್ತಪಡಿಸಿದ್ದಾನೆ. 'ಹೋತ' ಎಂದರೆ ಮನುಷ್ಯನಲ್ಲಿ ತುಂಬಿಕೊಂಡಿರುವ ಹುಸಿ, ವಂಚನೆ ಮೊದಲಾದ ಅವಗುಣಗಳು, ಇವುಗಳನ್ನು ನಿವಾರಿಸಬೇಕಾಗಿದೆ. 'ಆಡು' ಎಂದರೆ ವಾಚಾಳತನ. ಕೆಲವರಿಗೆ ಮಾತನಾಡುವುದೇ ಬಂಡವಾಳವಾಗಿದೆ. ಅದನ್ನು ನಿಲ್ಲಿಸಬೇಕಾಗಿದೆ. ಕುರಿಯು ಮೌಢ್ಯತೆಯ ಸಂಕೇತ. ಇಂತಹ ಮೌಢ್ಯಗಳನ್ನು ನಿವಾರಿಸಬೇಕಾಗಿದೆ. ಟಗರು ಪ್ರಾಣಿ ಸಹಜವಾದ ಕ್ರೌರ್ಯಗುಣ. ಇಂತಹ ಗುಣಗಳು ಮನುಷ್ಯನಲ್ಲಿ ಅಡಕವಾಗಿವೆ. ಅವುಗಳನ್ನು ತಡೆಯಬೇಕಾಗಿದೆ. ಇಂತಹ ಹೋತ, ಆಡು, ಕುರಿ, ಟಗರುಗಳ ಹಿಂಡನ್ನು ಒಂದು ಕಡೆ ಒಬ್ಬಳಿತೆ ಮಾಡಿ ನಿಲ್ಲಿಸಬೇಕಾಗಿದೆ. ಹುಲಿಯು ದ್ವೇಷದ ಸಂಕೇತ. ತೋಳ ಎಲ್ಲವನ್ನೂ ಕೊಂದು ತಿನ್ನುವುದರ ಪ್ರತೀಕ. ಚೋರ ಮೃತ್ಯುವಿನ ಸಂಕೇತ. ಇಂತಹ ಹುಲಿ, ತೋಳ, ಚೋರ ಭಯವನ್ನು ನಿವಾರಿಸಿ ಹಿಂಡಿಗೆ ಒಡೆಯನಾಗಿ ಕಾಯುವವನು ನೀನೇ ವೀರಬೀರೇಶ್ವರ ಎಂಬುದಾಗಿ ಕುರುಬಗೊಲ್ಲಾಳ ತನ್ನ ವಚನದಲ್ಲಿ ವಿವರಿಸಿದ್ದಾರೆ.

ವಚನಗಳ ಸಂಖ್ಯಾದೃಷ್ಟಿಯಿಂದ ಅಲ್ಪವಾದರೂ ಸತ್ವದ ದೃಷ್ಟಿಯಿಂದ ಗೊಲ್ಲಾಳನ ವಚನಗಳು ಮೌಲಿಕವಾಗಿವೆ. ತನ್ನ ಕಾಯಕ ಪರಿಭಾಷೆಯನ್ನೇ ವಚನಗಳಲ್ಲಿ ಅಧ್ಯಾತ್ಮಿಕ ನೆಲೆಯಲ್ಲಿ ಬಳಸುವ ಗೊಲ್ಲಾಳ ದೈವದ ದೃಷ್ಟಿಯಿಂದ ಅತ್ಯಂತ ವಿಶ್ವಾಸಿಗನಾಗಿದ್ದಾನೆ. ಕುರುಬ ಗೊಲ್ಲಾಳ ಮತ್ತು ಈತನ ವಚನಗಳ ಬಗೆಗೆ ಹೆಚ್ಚಿನ ಅಧ್ಯಯನವಾಗಿಲ್ಲ. ಕುರುಬ ಗೊಲ್ಲಾಳ ಹಾಗೂ ಭಕ್ತ ಕನಕದಾಸ ಇಬ್ಬರ ನಡುವಿನ ತೌಲನಿಕ ಅಧ್ಯಯನವಾಗಬೇಕಿದೆ. ಕನಕದಾಸರಿಗಿಂತಲೂ ಪೂರ್ವದ ಕುರುಬ ಗೊಲ್ಲಾಳನ ಮಹತ್ವವನ್ನು ಆ ಸಮುದಾಯದವರಿಗೆ ಹಾಗೂ ಎಲ್ಲರಿಗೆ ತಿಳಿಸಬೇಕಾಗಿದೆ. ಕುರುಬ ಗೊಲ್ಲಾಳನಿಗೆ ಸಲ್ಲಬೇಕಾದ ಮಾನ್ಯತೆ ಲಭಿಸಬೇಕಾಗಿದೆ.

❖







## 'ನಾನು' ಒಂದು ಜಿಜ್ಞಾಸೆ

–ಕೆ.ಎಸ್. ಮಹದೇವಪ್ಪ *

**ಈ** ಆಧುನಿಕ ಸಂಕೀರ್ಣ ಜಗತ್ತಿನಲ್ಲಿ ಹಿರಿಯ ನಾಗರೀಕರಿಗೆ ಒಂದಲ್ಲ ಒಂದು ಸಂದರ್ಭದಲ್ಲಿ 'ನಾನು ಯಾರು? ಏನು? ಎಲ್ಲಿಂದ ಬಂದೆ? ಎಲ್ಲಿಗೆ ಪಯಣ? ಯಾಕೆ ಈ ಪ್ರಪಂಚದಲ್ಲಿದ್ದೇನೆ? ಯಾರಿಗಾಗಿ ನನ್ನ ಬದುಕು? ಎಂಬ ಅನೇಕ ಪ್ರಶ್ನೆಗಳು ಕಾಡುವುದು ಸಹಜ. ಇಂದು ನಮ್ಮ ಕಣ್ಣೆದುರಿಗಿರುವುದು ಈ ಪ್ರಪಂಚ. ಅದರಲ್ಲಿ ತುಂಬ ಅನುಭವಕ್ಕೆ ಬರುವುದು. 'ನಾನು, ತಾನು' ಆ ತನ್ನನ್ನು ತಾನು ಒಳಹೊಕ್ಕು ತಿಳಿದರೆ ಪ್ರಪಂಚದ ಗೂಡಾರ್ಥ ತಿಳಿದಂತಾಯಿತು ಎಂದು ದಾರ್ಶನಿಕರು, ಸಾಧುಸಂತರು ಹೇಳುತ್ತಾ ಬಂದಿದ್ದಾರೆ. ಏಕೆಂದರೆ ಎಲ್ಲೆಡೆಯಲ್ಲಿರುವ ಚೈತನ್ಯವೇ ತನ್ನಲ್ಲಿಯೂ ಇದೆ ಎಂಬ ಅರಿವು ಬಹಳ ಮುಖ್ಯ.

'ನಾನು' ಎಂಬ ತಿಳುವಳಿಕೆಗೆ ಆಧಾರವಾಗಿರುವುದು ಆತ್ಮವಸ್ತು. ನಾವು ಸದಾ ಶರೀರವೇ ನಾನು, ಇಂದ್ರಿಯಗಳೇ ನಾನು, ಮನಸ್ಸೇ ನಾನು ಎಂದೆಲ್ಲಾ ಯೋಚಿಸುತ್ತೇವೆ. ಪ್ರಶಾಂತ ಮನಸ್ಸಿನಿಂದ ಯೋಚಿಸಿದಾಗ ಎಚ್ಚರ, ಕನಸು ಮತ್ತು ಗಾಢನಿದ್ರೆಗಳೆಂಬ ಮೂರು ಅವಸ್ಥೆಗಳಲ್ಲಿ ನಾನು ಇರುವುದು ಅರಿವಾಗುತ್ತದೆ. ನಾನು ನಿನ್ನೆ ಸುಖವಾಗಿ ನಿದ್ರಿಸಿದೆ ಎಂಬ ಅರಿವು ಮೂಡುವುದು ನಿದ್ರೆಯಿಂದ ಎದ್ದ ನಂತರವೇ ಅಲ್ಲವೇ? ಗಾಢನಿದ್ರೆಯಲ್ಲಿ ಯಾವ ಲೌಕಿಕ ವ್ಯವಹಾರವೂ ಇರುವುದಿಲ್ಲ ನಾನು, ನನ್ನದು, ಇದು–ಅದು, ತಂದೆ–ತಾಯಿ, ಬಂಧು ಬಳಗ, ಎಲ್ಲರೂ ದೂರವಾಗಿರುವುದು. ಇಂಥಹ ಸ್ಥಿತಿಯಲ್ಲಿರುವಾಗ ನಾನು ಯಾರು? ನಿಜವಾಗಿ ನನ್ನ ಅಸ್ತಿತ್ವವೇನು ? ನನ್ನ ನಿಜ ಸ್ವರೂಪವೇನು? ಈ ಎಲ್ಲ ಜಟಿಲ ಪ್ರಶ್ನೆಗಳಿಗೆ ಉತ್ತರ ಸಿಗಬೇಕಾದರೆ ಜ್ಞಾನಜ್ಯೋತಿಯ ಅನುಭವವಾಗಬೇಕು. ನಮ್ಮ ಸಕಲ ತಾಪಗಳ ನಿವಾರಣೆಗೆ ಆತ್ಮಜ್ಞಾನವೊಂದೇ ದಿವ್ಯೌಷಧ ಎಂಬುದನ್ನು ಮಾನವ ಅರಿಯಬೇಕು.

ಭಗವಂತನು ಈ ಪ್ರಪಂಚದ ಸೃಷ್ಟಿಕರ್ತ, ಪಾಲಕ ಎಂಬುದನ್ನು ಎಲ್ಲರೂ ಅರಿಯಬೇಕು. ತಾನು ಸೃಷ್ಟಿಸಿದ ಸಸ್ಯ, ಪ್ರಾಣಿ, ಜನರಿಗಾಗಿ ಫಲವತ್ತಾದ ನೆಲ, ಮಧುರವಾದ ಜಲ, ಗಾಳಿ, ಬೆಳಕು ಎಲ್ಲವನ್ನೂ ಕರುಣಿಸಿದ್ದಾನೆ, ಆ ಭಗವಂತ. ಆದರೆ ನಾವೇನು ಮಾಡುತ್ತಿದ್ದೇವೆ? ಈ ಎಲ್ಲ ಸೌಲಭ್ಯಗಳನ್ನು ಎಲ್ಲರೊಡನೆ ಹಂಚಿಕೊಂಡು ಅನುಭವಿಸುತ್ತಾ, ಶಾಂತಿ, ನೆಮ್ಮದಿಯಿಂದ ಬದುಕುವುದನ್ನು ಬಿಟ್ಟು, ಇದು ನನ್ನದು, ನಿನ್ನದಲ್ಲ ಎಂದು ಬಡಿದಾಡುತ್ತಾ ಬದುಕನ್ನು ನರಕವಾಗಿಸಿಕೊಂಡಿದ್ದೇವೆ. 'ನಾನು–ನೀನು' ನನ್ನದು ನಿನ್ನದು ಇರುವವರೆಗೂ ಕಲಹ, ಅಶಾಂತಿ ತಪ್ಪಿದ್ದಲ್ಲ ಎಂಬುದು ಸಾರ್ವಕಾಲಿಕ ಸತ್ಯವಲ್ಲವೇ?

'ನಾನು' ಎಂಬುದು ಈ ದೇಹ ಎಂದುಕೊಂಡಿರುವ ನಮಗೆ ಆ ದೇಹಕ್ಕೆ ಅನುಕೂಲಕರವಾದ ವಿಷಯದಲ್ಲಿ ಪ್ರೀತಿ, ಪ್ರತಿಕೂಲವಾದ ವಿಷಯದಲ್ಲಿ ದ್ವೇಷವೂ ಸಹಜ. ಈ ರಾಗ–ದ್ವೇಷಗಳು ಸಂಸಾರ ಬಂಧನವನ್ನು ಮತ್ತಷ್ಟು ಬಿಗಿಗೊಳಿಸುವ ಕೀಲುಗಳು ಎಂಬುದನ್ನು ಅರಿಯಬೇಕು. ಇವುಗಳಿಂದ ತಪ್ಪಿಸಿಕೊಳ್ಳಲು ಆತ್ಮಜ್ಞಾನದ ಅರಿವನ್ನು 'ನಾನು' ಪಡೆಯಲು ಪ್ರಯತ್ನಿಸಬೇಕು. ಶರೀರ–ಇಂದ್ರಿಯ–ಮನಸ್ಸು ಇವುಗಳಲ್ಲಿಯೇ 'ನಾನು' ಗಿರಕಿ ಹೊಡೆಯುತ್ತಾ ಸಂಸಾರ ಬಂಧನದಲ್ಲಿ ವಿಲವಿಲನೆ ಒದ್ದಾಡುತ್ತಿರುವುದು ನಮಗೆ ತಿಳಿದ ಸಂಗತಿಯೇ.

'ನಾನು' ಎಂಬ ಅಭಿಮಾನ/ದುರಭಿಮಾನವನ್ನು ಕ್ರಮೇಣ ಹಿಂದಕ್ಕೆ ಪಡೆಯಲು ನಾವು ಪ್ರಯತ್ನಿಸಬೇಕು. ಅದನ್ನು ಸಾಧಿಸಬೇಕಾದ ಯಾವ ಪುರುಷಾರ್ಥಗಳಿರುವುದಿಲ್ಲ. ಕಳೆದುಕೊಳ್ಳಬೇಕಾದ ಕರ್ಮಗಳಿರುವುದಿಲ್ಲ. ಆಗ ನಿತ್ಯ ಶುದ್ಧ ಬದ್ಧ ಮುಕ್ತ ಸ್ವಭಾವ ನಮ್ಮದಾಗುತ್ತದೆ.

ಪ್ರತಿ ಮಾನವನಿಗೆ ಜೀವಿಸಲು ಆಶೆ ಅಗತ್ಯವೆಂಬುದು ನಿತ್ಯ ಸತ್ಯವೇ, ಆದರೆ ಅದಕ್ಕೊಂದು ಮಿತಿ ಇರಬೇಕಲ್ಲವೇ? ಧನ ಸಂಪಾದನೆ, ಭೂಮಿಯ ಆಶೆ, ಅಧಿಕಾರ–ಕೀರ್ತಿಗಳ ವ್ಯಾಮೋಹ ಇವುಗಳ ಬಲೆಯಲ್ಲಿ ಸಿಲುಕಿ, ತನ್ನ ಇಡೀ ಬದುಕನ್ನೇ ಬಲಿಗೊಡುತ್ತಿರುವ ಈಗಿನ ಮಾನವರ ಗುರಿಯೇನೆಂಬುದನ್ನು ಯೋಚಿಸಿದರೆ ಉತ್ತರಿಸುವುದು ಎಂಥವರಿಗೂ ಕಷ್ಟವೇ.

* ನಿವೃತ್ತ ಜಂಟಿ ನಿರ್ದೇಶಕರು(ತರಬೇತಿ), ಬೆಂಗಳೂರು.

ಚಿಂತಿಸಬೇಡ, ಶ್ರೀಶೈಲದಿಂದ ಮಲ್ಲಿಕಾರ್ಜುನ ಲಿಂಗವನ್ನು ತಂದುಕೊಡುವುದಾಗಿ ಭರವಸೆ ಇತ್ತ. ಆಗ ಗೊಲ್ಲಾಳನು ಕೂಡಲೇ ತಾನು ಕುರಿ ಮೇಯಿಸುವ ಸ್ಥಳಕ್ಕೆ ಹೋಗಿ ಅಲ್ಲಿ ತಾನು ತಯಾರಿಸಿದ ಹೊಸ ಪಾದರಕ್ಷೆಗಳನ್ನು ಹಾಗೂ ಕುಡಿಕೆಯಲ್ಲಿ ಹುದುಗಿಟ್ಟಿದ್ದ ಹೊನ್ನನ್ನು ತಂದು ನಂದಯ್ಯನಿಗೆ ಕೊಟ್ಟು ಶ್ರೀಶೈಲದಿಂದ ಲಿಂಗವನ್ನು ತಂದು ಕೊಡಬೇಕೆಂದು ಪ್ರಾರ್ಥಿಸಿಕೊಂಡ. ಅವುಗಳನ್ನೆಲ್ಲಾ ಪಡೆದ ನಂದಯ್ಯ ಮರಳಿಬರುವಾಗ ಲಿಂಗವನ್ನು ತಂದು ಕೊಡುವುದಾಗಿ ವಚನ ಕೊಟ್ಟು ಶಿವಭಕ್ತರೊಂದಿಗೆ ಹೆಜ್ಜೆಯನ್ನು ಹಾಕಿ ಶ್ರೀಶೈಲಕ್ಕೆ ನಡೆದ.

ಇತ್ತ ವೀರಗೊಲ್ಲಾಳ ಪ್ರತಿನಿತ್ಯವೂ ನಂದಯ್ಯ ಬರುವ ದಾರಿಯನ್ನು ಎದುರು ನೋಡುತ್ತ ಕಾಯುತ್ತಿದ್ದ. ತನಗಾಗಿ ನಂದಯ್ಯ ಲಿಂಗವನ್ನು ಶ್ರೀಶೈಲದಿಂದ ತಂದುಕೊಡುತ್ತಾನೆ ಎಂಬ ಅಸೀಮ ನಂಬಿಕೆ ಅವನದು. ಕೆಲವು ದಿನಗಳು ಕಳೆದ ತರುವಾಯ ಶ್ರೀಶೈಲದಿಂದ ಶಿವಭಕ್ತರ ಗುಂಪು ಮರಳಿ ಬರುತ್ತಿತ್ತು. ಆಗ ಅದನ್ನು ಗಮನಿಸಿದ ಗೊಲ್ಲಾಳ ಅಲ್ಲಿಯೇ ಮಲ್ಲಿಕಾರ್ಜುನ ಲಿಂಗವನ್ನು ಕಂಡಂತೆ ಹರ್ಷಿಸುತ್ತ ನಂದಯ್ಯನಿಗೆ ಕಾಯುತ್ತ ನಿಂತನು. ಆ ಗುಂಪಿನಲ್ಲಿದ್ದ ನಂದಯ್ಯ ಇವನಿಂದ ಪಾದರಕ್ಷೆ ಹಾಗೂ ಹೊನ್ನನ್ನೇನೊ ಪಡೆದಿದ್ದ. ಆದರೆ ಮರಳಿ ಬರುವಾಗ ಲಿಂಗವನ್ನು ಮಾತ್ರ ತಂದಿರಲಿಲ್ಲ. ಬರುವ ದಾರಿಯಲ್ಲಿ ಗೊಲ್ಲಾಳ ತನಗಾಗಿ ಕಾಯುತ್ತಿರುವುದನ್ನು ಗಮನಿಸಿದಾಗ ಅವನಿಗೆ ಲಿಂಗದ ನೆನಪಾಯಿತು. ಏನು ಮಾಡಬೇಕೆಂಬುದು ತೋರದಾಯಿತು. ಅವನಿಗೆ ಲಿಂಗವನ್ನು ನೀಡದಿದ್ದರೆ ಗೊಲ್ಲಾಳ ಎಲ್ಲಿ ಸಿಟ್ಟಿಗೇಳುವನೋ? ಎಂಬ ಭಯವೂ ಕಾಡಿತ್ತು. ಆ ಕೂಡಲೇ ಅವನಿಗೊಂದು ಉಪಾಯ ಹೊಳೆಯಿತು. ಅಲ್ಲಿಯೇ ಚೆಲ್ಲಿದ್ದ ಕುರಿಯ ಪಿಚಿಕೆಯನ್ನು ತನ್ನ ವಸ್ತ್ರದಲ್ಲಿ ಕಟ್ಟಿಕೊಂಡು ಗೊಲ್ಲಾಳನ ಸಮೀಪಕ್ಕೆ ಬಂದ. ಅವನಿಗೆ ಕುರಿಯ ಪಿಚಿಕೆಯನ್ನೇ ಶ್ರೀಶೈಲದಿಂದ ತಂದ ಲಿಂಗವೆಂದು ನೀಡಿದ. ನಂದಯ್ಯ ಗೊಲ್ಲಾಳನಿಗೆ ಪೂಜೆಯ ವಿಧಾನ, ಲಿಂಗದ ಮಹಾತ್ಮೆ ಇತ್ಯಾದಿಗಳನ್ನು ಬೋಧಿಸುತ್ತಾನೆ ಮತ್ತು ಸರ್ವ ಸಮರ್ಪಣಾಭಾವದಲ್ಲಿ ಲಿಂಗವನ್ನು ಪೂಜಿಸಿದರೆ ಅವನೊಬ್ಬ ಶಿವಶರಣನಾಗುವನೆಂದು ಭರವಸೆ ನೀಡುತ್ತಾನೆ. ಆ ಲಿಂಗವನ್ನು ಒಂದು ಕಡೆ ಸ್ಥಾಪಿಸಿ, ಇಪ್ಪತ್ತೊಂದು ದಿನ ಕುರಿಯ ಹಾಲಿನಲ್ಲಿ ಅಭಿಷೇಕವನ್ನು ಮಾಡಿ, ಪ್ರತಿದಿನ ಪ್ರಸಾದವನ್ನು ನೀಡಿ ಪೂಜಿಸುವಂತೆ ಸಲಹೆ ನೀಡುತ್ತಾನೆ. ಹೀಗೆ ಹೇಳಲು ಕಾರಣ ತಾನು ಅಷ್ಟರೊಳಗೆ ತನ್ನ ಊರಿಗೆ ಹೋಗಿ ಗೊಲ್ಲಾಳನಿಂದ ತಪ್ಪಿಸಿಕೊಳ್ಳಬಹುದೆಂಬ ಠಕ್ಕು ನಂದಯ್ಯನದು.

ಆನಂದಪರವಶನಾದ ಗೊಲ್ಲಾಳ ಆ ಕುರಿಯ ಪಿಚಿಕೆಯನ್ನೇ ಲಿಂಗವೆಂದು ಅನನ್ಯವಾಗಿ ನಂಬಿ ತಮ್ಮ ಕುರಿಯ ಕಳ್ಳೆಯಲ್ಲಿ ಪ್ರತಿಷ್ಠಾಪಿಸಿ ಪ್ರತಿನಿತ್ಯವೂ ಕುರಿಯ ಹಾಲಿನಿಂದ ಅಭಿಷೇಕವನ್ನು ಮಾಡುತ್ತಿದ್ದ. ಕಾಡಿನಲ್ಲಿ ಬೆಳೆದ ಹೂಗಳನ್ನು ಹಾಗೂ ಹಣ್ಣುಗಳನ್ನು ತಂದು ಅರ್ಪಿಸಿ, ಭಕ್ತಿಭಾವದಿಂದ ನಮಸ್ಕರಿಸುತ್ತಿದ್ದ. ತಾನು ತಂದ ಬೋನವನ್ನು ನೈವೇದ್ಯವಾಗಿ ಹಿಕ್ಕೆಯ ಲಿಂಗಕ್ಕೆ ಅರ್ಪಿಸುತ್ತಿದ್ದ.

ಹೀಗೆ ಪ್ರತಿನಿತ್ಯ ಗೊಲ್ಲಾಳನ ಪೂಜೆ ನೆರವೇರುತ್ತಿತ್ತು. ಪ್ರತಿನಿತ್ಯ ಹಾಲನ್ನು ಮನೆಗೆ ಕಳುಹಿಸುತ್ತಿದ್ದವನು ಈಗ ಆ ಹಾಲನ್ನೆಲ್ಲ ಹಿಕ್ಕೆಯ ಲಿಂಗಕ್ಕೆ ಅಭಿಷೇಕ ಮಾಡುತ್ತಿದ್ದ. ಗೊಲ್ಲಾಳನು ಮನೆಗೆ ಕೆಲವು ದಿನಗಳಿಂದ ಕುರಿಯ ಹಾಲನ್ನು ತಾರದಿರುವುದರಿಂದ ಕಾಟಕೋಟನಿಗೆ ಅನುಮಾನ ಹಾಗೂ ಸಿಟ್ಟು ಬಂದಿತು. ಇದರ ಸತ್ಯಾಸತ್ಯತೆಗಳನ್ನು ತಿಳಿದುಕೊಳ್ಳಲೆಂದು ಗೊಲ್ಲಾಳ ಕುರಿ ಮೇಯಿಸುತ್ತಿದ್ದ ಸ್ಥಳಕ್ಕೆ ಬಂದನು. ಅಲ್ಲಿ ನೋಡಿದರೆ ಕುರಿಗಳೆಲ್ಲ ಮೇಯುತ್ತಿವೆ. ಗೊಲ್ಲಾಳನು ಕುರಿಯ ಕಳ್ಳೆಯಲ್ಲಿ ಹಿಕ್ಕೆಯನ್ನು ಪ್ರತಿಷ್ಠಾಪಿಸಿ, ಕುರಿಯ ಹಾಲನ್ನು ಅಭಿಷೇಕವಾಗಿ ಎರೆದು ಭಕ್ತಿಯಿಂದ ಪೂಜೆ ಮಾಡುತ್ತಿದ್ದ. ಇದರಿಂದ ಕೋಪಗೊಂಡ ಕಾಟಕೂಟನು ಆವೇಶದಿಂದ ಬಂದು ಕಳ್ಳೆಯ ಮೇಲಿದ್ದ ಹಿಕ್ಕೆಯ ಲಿಂಗವನ್ನು ಕಾಲಿನಿಂದ ತುಳಿದು ನಾಶಮಾಡುತ್ತಾನೆ. ಸ್ವಲ್ಪ ಸಮಯವಾದ ನಂತರ ಧ್ಯಾನದಿಂದ ಎಚ್ಚರನಾದ ಗೊಲ್ಲಾಳ ನಡೆದ ಘಟನೆಯ ಬಗೆಗೆ ಕೃದ್ಧನಾಗುತ್ತಾನೆ. ಈ ಕೆಲಸವನ್ನು ಮಾಡಿದ ತಂದೆಯನ್ನು ಕೊಲ್ಲಲೆಂದು ಮುಂದಾಗುತ್ತಾನೆ. ಆಗ ಶಿವನು ಪ್ರತ್ಯಕ್ಷನಾಗಿ ದರ್ಶನವನ್ನು ನೀಡಿದನೆಂಬುದು ಗೊಲ್ಲಾಳನ ಬಗೆಗೆ ಜನಜನಿತವಾದ ಜೀವನ ಕಥನವಾಗಿದೆ.

ಈ ಕಥೆಯು ಪವಾಡದಂತೆ ಕಂಡರೂ ಕೂಡ





ಇದರಲ್ಲಿ ಪ್ರತಿಪಾದಿತವಾದ ಆಶಯವನ್ನು ನಾವು ಗಮನಿಸಬಹುದಾಗಿದೆ. ಈ ಬಗೆಗೆ ಪ್ರೊ. ಜಿ.ಎಸ್. ಸಿದ್ಧರಾಮಯ್ಯ ಅವರ "ಈ ಕಥೆಯನ್ನು ವಾಸ್ತವಿಕ ದೃಷ್ಟಿಯ ವಿಮರ್ಶಾ ಕಣ್ಣಿನಲ್ಲಿ ನೋಡ ಹೋದರೆ ಅವಾಸ್ತವಿಕ ಹುಸಿಸಂಗತಿಗಳಾಗಿ ಅಲ್ಲಿನ ವಿಚಾರಗಳು ನಿರಾಕರಣೆಗೆ ಒಳಗಾಗುತ್ತವೆ. ಆದರೆ ಆಶಯ ಪ್ರತೀತ ಭಾವಸತ್ಯವನ್ನು ಪರಿಭಾವಿಸುವ ಒಳನೋಟ ಹರಿಸಿದರೆ ಸಾಧಕನೊಬ್ಬನ ಸಾಧನೆಯ ಹರವು ತೆರೆದುಕೊಳ್ಳುತ್ತವೆ" ಎಂಬ ವಿಚಾರಗಳು ಮನನೀಯ. ಈ ಹಿನ್ನೆಲೆಯಲ್ಲಿ ಈ ಕಥೆಯಲ್ಲಿ ಗೊಲ್ಲಾಳನ ಮುಗ್ಧಭಕ್ತಿಯನ್ನು ಹಾಗೂ ನಂದಯ್ಯನ ವಂಚಕತನವನ್ನು ಗಮನಿಸಬಹುದಾಗಿದೆ.

ಆನಂತರದಲ್ಲಿ ಗೊಲ್ಲಾಳ ವೀರಗೊಲ್ಲಾಳನಾಗಿ ಶಿವಶರಣನಾದ. ಕಲ್ಯಾಣದಲ್ಲಿ ಬಸವಣ್ಣನವರ ಚಳುವಳಿಯ ವಿಚಾರಗಳಿಂದ ಆಕರ್ಷಿತನಾಗಿ ಕಲ್ಯಾಣಕ್ಕೆ ಬಂದು ಅನುಭವ ಮಂಟಪದ ಗೋಷ್ಠಿಯಲ್ಲಿ ಕೆಲವು ಕಾಲ ಭಾಗವಹಿಸಿದ. ಈ ಸಂದರ್ಭದಲ್ಲಿಯೇ ತಾನು 'ವೀರ ಬೀರೇಶ್ವರ' ಅಂಕಿತದಲ್ಲಿ ವಚನಗಳನ್ನು ರಚನೆ ಮಾಡಲು ಪ್ರಾರಂಭಿಸಿರಬಹುದು. ಗೊಲ್ಲಾಳ ಕುರುಬ ಜನಾಂಗಕ್ಕೆ ಸೇರಿದವನೆಂಬುದಕ್ಕೆ ಆತನ ವಚನಗಳಲ್ಲಿಯೇ ಸಾಕ್ಷ್ಯ ಸಿಗುತ್ತದೆ.

ವೀರಗೊಲ್ಲಾಳ ಕಲ್ಯಾಣದಿಂದ ಮರಳಿ ಗೊಲಗೇರಿಯಲ್ಲಿ ನೆಲೆಸುತ್ತಾನೆ. ಗೊಲಗೇರಿಯಲ್ಲಿ ಶಿವಚಿಂತನೆಯನ್ನು ಮಾಡುವುದಲ್ಲದೆ, ಜನರಲ್ಲಿ ವೈಚಾರಿಕತೆಯನ್ನು ಬೋಧಿಸುತ್ತಾನೆ. ಅಲ್ಲಿಯೇ ಲಿಂಗೈಕ್ಯನಾಗುತ್ತಾನೆ. ಇಂದಿಗೂ ಗೊಲಗೇರಿಯಲ್ಲಿ ಗೊಲ್ಲಾಳನ ಸಮಾಧಿಯನ್ನು ಹಾಗೂ ದೇವಾಲಯವನ್ನು ನೋಡಬಹುದಾಗಿದೆ. ಪ್ರತಿ ವರ್ಷ ಗೊಲಗೇರಿಯಲ್ಲಿ ಗೊಲ್ಲಾಳೇಶ್ವರನ ಜಾತ್ರೆಯು ಅತ್ಯಂತ ವಿಜೃಂಭಣೆಯಿಂದ ಆಚರಿಸಲ್ಪಡುತ್ತಿದೆ. ಗೊಲಗೇರಿ ವೀರಗೊಲ್ಲಾಳನ್ನು ಕುರಿತು ಜಾನಪದ ಕಾವ್ಯವೊಂದು ರಚನೆಯಾಗಿದೆ. ಇದರಿಂದ ಈತ ಜನಪದರ ಮೇಲೆ ಎಷ್ಟು ಪ್ರಭಾವ ಬೀರಿದ್ದಾನೆ ಹಾಗೂ ಇಂದಿಗೂ ಜನರ ಮನದಲ್ಲಿ ನೆಲೆಸಿದ್ದಾನೆ ಎಂಬುದನ್ನು ಸೂಚಿಸುತ್ತದೆ.

ಕರ್ನಾಟಕ ಸರಕಾರ ಪ್ರಕಟಿಸಿರುವ ಸಮಗ್ರ ವಚನ ಸಂಪುಟ-೮ ರಲ್ಲಿ ಕುರುಬ ಗೊಲ್ಲಾಳನ ಒಟ್ಟು ೧೧ ವಚನಗಳು ಲಭ್ಯವಿವೆ. ವೀರಬೀರೇಶ್ವರ ಲಿಂಗ ಈತನ ವಚನಗಳ ಅಂಕಿತ. ತನ್ನ ಕಾಯಕದ ಪರಿಭಾಷೆಯನ್ನೇ ವಚನಗಳಲ್ಲಿ ಬಳಕೆ ಮಾಡುತ್ತಾನೆ. ಆಡು, ಹೋತ, ಕುರಿ, ಟಗರು, ಹಿಂಡು, ಹಿಕ್ಕೆ –ಮುಂತಾದ ಕಾಯಕ ಪರಿಭಾಷೆಯನ್ನು ಆಧ್ಯಾತ್ಮಿಕ ಪರಿಭಾಷೆಯಾಗಿ ಬಳಸಿದ್ದಾನೆ.

'ಕಂಥೆಯ ಕಟ್ಟಿ, ತಿತ್ತಿಯ ಹೊತ್ತು, ಮರಿಯ ನಡಸುತ್ತ ದೊಡ್ಡೆಯ ಹೊಡೆವುತ್ತ, ಅಡ್ಡಗೋಲಿನಲ್ಲಿ ಹೋಹ ಚುಕ್ಕಿ ಬೊಟ್ಟಿನವ ತಿಟ್ಟುತ್ತ, ಹಿಂಡನಗಲು ಹೋಹ ದಿಂಡೆಯ ಮಣಿಘಟ್ಟವ ಅಭಿಸಂಧಿಯ ಕೋಲಿನಲ್ಲಿಡುತ್ತ, ಈ ಹಿಂಡಿನೊಡನೆ ತಿರುಗಾಡುತ್ತಿದ್ದೇನೆ... ಸುಸಂಗದಲ್ಲಿರಿಸು' ಎಂಬ ಮಾತುಗಳಲ್ಲಿ ವೀರಗೊಲ್ಲಾಳ ಕುರುಬ ಸಮುದಾಯಕ್ಕೆ ಸೇರಿದವನೆಂಬುದು ವೇದ್ಯವಾಗುತ್ತದೆ. ಅಲ್ಲದೆ ಈ ವಚನದಲ್ಲಿ ಹಲವು ವಿಧದ ಕುರಿಗಳನ್ನು ಹಾಗೂ ಕುರಿಗಳನ್ನು ಕಾಯುವ ವಿಧಾನವನ್ನು ತಿಳಿಸಿರುವುದಲ್ಲದೆ ಬೆಡಗಿನ ಮುಖಾಂತರ ಆಧ್ಯಾತ್ಮಿಕ ಸಾಧನೆಯನ್ನು ತನ್ನ ಕಾಯಕದ ಪ್ರತಿಮೆಗಳಲ್ಲಿ ಬಳಸಿರುವುದು ಮನೋಜ್ಞವಾಗಿದೆ. ಈ ವಚನ ವೀರಗೊಲ್ಲಾಳನ ಆಧ್ಯಾತ್ಮಿಕ ಔನ್ನತ್ಯಕ್ಕೆ ಹಾಗೂ ವಚನಗಳ ಪ್ರತಿಮಾ ವಿಧಾನಕ್ಕೂ ಉದಾಹರಣೆಯಾಗಿದೆ.

*ಕಲ್ಲು ಲಿಂಗವಲ್ಲ, ಉಳಿಯ ಮೊನೆಯಲ್ಲಿ ಒಡೆಯಿತ್ತು.*
*ಮರ ದೇವರಲ್ಲ, ಉರಿಯಲ್ಲಿ ಬೆಂದಿತ್ತು.*
*ಮಣ್ಣು ದೇವರಲ್ಲ, ನೀರಿನ ಕೊನೆಯಲ್ಲಿ ಕದಡಿತ್ತು.*
*ಇಂತಿವನೆಲ್ಲವನರಿತ ಚಿತ್ತ ದೇವರಲ್ಲ. ಕರಣಂಗಳ*
*ಮೊತ್ತದೊಳಗಾಗಿ ಸತ್ವಗೆಟ್ಟಿತ್ತು. ಇಂತಿವ ಕಳೆದುಳಿದ*
*ವಸ್ತುವಿಪ್ಪೆಡೆ ಯಾವುದೆಂದಡೆ: ಕಂಡವರೊಳಗೆ*
*ಕೈಕೊಂಡಾಡದೆ, ಕೊಂಡ ವ್ರತದಲ್ಲಿ*
*ಮತ್ತೊಂದನೊಡಗೂಡಿ ಬೆರೆಯದೆ, ವಿಶ್ವಾಸ ಗ್ರಹಿಸಿ*
*ನಿಂದಲ್ಲಿ ಆ ನಿಜಲಿಂಗವಲ್ಲದೆ, ಮತ್ತೊಂದು*
*ಪೆರತನರಿಯದೆ ನಿಂದಾತನೆ ಸರ್ವಾಂಗಲಿಂಗಿ,*
*ವೀರಬೀರೇಶ್ವರಲಿಂಗದೊಳಗಾದ ಶರಣ.*

ಕಲ್ಲಿನ ಲಿಂಗವು ದೈವವಲ್ಲ, ಅದಾದರೂ ಮಾನವ ಉಳಿಯ ಮೊನೆಯಿಂದ ನಿರ್ಮಿಸಿದ್ದು. ಮರ ದೈವವಲ್ಲ,

ಮೂಲ ತಳಹದಿ ದುಡಿಮೆಯನ್ನು ನಂಬಿ ಬದುಕಿ ದುಡಿಮೆಯಲ್ಲಿಯೇ ದೇವರನ್ನು ಕಾಣುವ ಕಾಯಕ ನಿಷ್ಠೆ ಶರಣರದಾಗಿತ್ತು. ಅದಕ್ಕಾಗಿಯೇ 'ನುಲಿಯಚಂದಯ್ಯ' ಶರಣರು ಕಾಯಕದ ಮಹಿಮೆಯನ್ನು ತಮ್ಮ ಒಂದು ವಚನದಲ್ಲಿ ಹೀಗೆ ಕಂಡರಿಸಿದ್ದಾರೆ

*'ಗುರುವಾದರೂ ಕಾಯಕದಿಂದಲೇ ಮುಕ್ತಿ*
*ಲಿಂಗವಾದರೂ ಕಾಯಕದಿಂದಲೇ ಶಿಲೆಯ ಕಳೆಹರಿವುದು*
*ಜಂಗಮವಾದರೂ ಕಾಯಕದಿಂದಲೇ ವೇಷದಪಾಶ ಹರಿವುದು*
*ಇದು ಚೆನ್ನಬಸವಣ್ಣ ಪ್ರಿಯ ಚಂದೇಶ್ವರ ಲಿಂಗದ ಅರಿವು'*

ಶರಣರ ಇಂಥ ಕಾಯಕ ತತ್ತ್ವ ಇಂದಿನ ಸಮಾಜಕ್ಕೂ ಮಾರ್ಗದರ್ಶಿಯಾಗಿದೆ. ಕಾಯಕವನ್ನು ಕೈಲಾಸದ ಮಟ್ಟಕ್ಕೇರಿಸಿ ವೃತ್ತಿಯಲ್ಲಿ ಸಮಾನತೆ ತರಬಯಸಿದ ಶರಣರ ಕೊಡುಗೆ ಇಂದಿನ ಸಮಾಜಕ್ಕೆ ಅತ್ಯಮೂಲ್ಯವಾದುದಾಗಿದೆ. ಶ್ರಮ ಪರಂಪರೆ, ಸಮ ಸಂಸ್ಕೃತಿ ನಮ್ಮ ಭಾರತೀಯರದು. ಅಂಥ ಪರಂಪರೆ ಮರೆತರೆ ನಮಗೆ ಭವಿಷ್ಯವಿಲ್ಲ ನೆಮ್ಮದಿಯಿಲ್ಲ, ಬಾಳಿಲ್ಲ, ಬದುಕಿಲ್ಲ ಎಂಬುದನ್ನು ಇಂದಿನ ಸಮಾಜ ಚಿಂತನೆ ಮಾಡಬೇಕಾಗಿದೆ.

ಇಹ-ಪರಗಳ ಕುರಿತಾಗಿ ಶರಣರ ದೃಷ್ಟಿಯೇ ಬೇರೆಯಾಗಿತ್ತು. 'ದೇವಲೋಕ-ಮರ್ತ್ಯಲೋಕ ಬೇರಿಲ್ಲ ಕಾಣಿರೋ, ಸತ್ಯವ ನುಡಿವುದೇ ದೇವಲೋಕ ಅಸತ್ಯವ ನುಡಿವುದೇ ಮರ್ತ್ಯಲೋಕ, ಆಚಾರವೇ ಸ್ವರ್ಗ, ಅನಾಚಾರವೇ ನರಕ, ಇದಕ್ಕೆ ನೀವೇ ಪ್ರಮಾಣ ಕೂಡಲಸಂಗಮದೇವ'. ದೇವಲೋಕ, ಸ್ವರ್ಗ-ನರಕವೆಲ್ಲ ನಾವಿರುವಲ್ಲಿಯೇ ಇವೆ. ನಮ್ಮ ನಡೆ-ನುಡಿಯಲ್ಲಿಯೇ ಸ್ವರ್ಗನರಕಗಳಿವೆ ಎಂದು ಹೇಳಿ, ದೇವಲೋಕ, ಮರ್ತ್ಯಲೋಕ ಪದಗಳ ಭಿನ್ನತೆಯ ಭ್ರಮೆಯನ್ನು ಹೋಗಲಾಡಿಸಲು ಆಲೋಚಿಸಿದರು.

ಅಂದಿನ ಸಮಾಜದಲ್ಲಿನ ಬೇಕಾದಷ್ಟು ಮೂಢನಂಬಿಕೆ ಬಹುದೇವೋಪಾಸನೆ, ಡಾಂಭಿಕತೆಯನ್ನು ಸಾಕಷ್ಟು ಚಿಂತನೆ ಮಾಡಿ ಕೆಲವು, ಸಂದರ್ಭದಲ್ಲಿ ತೀವ್ರವಾಗಿ ಆಕ್ರೋಶ ವ್ಯಕ್ತಪಡಿಸಿದ್ದಾರೆ.

**ಮಡಕೆ ದೈವ, ಮರ ದೈವ, ಬೀದಿಯ ಕಲ್ಲು ದೈವ**
*ದೈವ, ದೈವವೆಂದು ಕಾಲಿಡಲಿಂಬಿಲ್ಲ'*

ಹಲವು ದೇವತಾರಾಧನೆಯನ್ನು ನಿಷೇಧಗೊಳಿಸಿ. 'ದೇವನೊಬ್ಬ ನಾಮಹಲವು' ಎಂಬುದಕ್ಕೆ ಚಾಲನೆ ನೀಡಿದರು. 'ಉಣ್ಣುವ ಜಂಗಮಬಂದಡೆ ಅತ್ತ ನಡೆಯೆಂದು ಕಳಿಸಿ, ಉಣ್ಣದ ಲಿಂಗಕ್ಕೆ ಬೋನವ ಹಿಡಿವ' ಜನರ ಮರುಳುತನವನ್ನು ಗೇಲಿ ಮಾಡಿದ್ದಾರೆ. ಇಂತಹ ಅಪರೂಪದ ವೈಚಾರಿಕತೆ ಶರಣರದ್ದು. ಸಾಮಾಜಿಕ ಮೌಲ್ಯ ಗಳು ಕುಸಿಯುತ್ತಿರುವ ಇಂದಿನ ಸಮಾಜಕ್ಕೆ ಶರಣರ ವಚನಗಳು ಶಕ್ತಿಯನ್ನು ತುಂಬುತ್ತವೆ

*'ಕಳಬೇಡ, ಕೊಲಬೇಡ, ಹುಸಿಯನುಡಿಯಲುಬೇಡ*
*ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ*
*ತನ್ನ ಬಣ್ಣಿಸಬೇಡ, ಇದಿರು ಹಳಿಯಲುಬೇಡ*
*ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ*
*ಇದೇ ನಮ್ಮ ಕೂಡಲಸಂಗಮದೇವನೊಲಿಸುವ ಪರಿ'*

ಈ ಸಪ್ತದೋಷಗಳನ್ನು ಮಾಡದೇ ಇದ್ದರೆ ವ್ಯಕ್ತಿ ಸುಸಂಸ್ಕೃತನಾಗುತ್ತಾನೆ. ಆತನ ಅಂತರಂಗ-ಬಹಿರಂಗ ಶುದ್ಧಿಗೂ ಈ ಮೇಲಿನ ದೋಷ ನಿವಾರಣೆಯೇ ಕಾರಣವೆಂದು ಹೇಳಿದ್ದಾರೆ. ದೇವರನ್ನೊಲಿಸಿಕೊಳ್ಳಲು ಶಿವಸಾಕ್ಷಾತ್ಕಾರಕ್ಕೆ ಕಾಡಿಗೆ ಹೋಗಿ ಘೋರ ತಪಸ್ಸು ಮಾಡುವ ಅಗತ್ಯವಿಲ್ಲ. ನಮ್ಮ ನಡೆಯನ್ನು ಶುದ್ಧಿಗೊಳಿಸಿಕೊಳ್ಳಬೇಕು ಎಷ್ಟೇ ಎಂದಿದ್ದಾರೆ.

ಶರಣರು ನಡೆಗೆ ಎಷ್ಟು ಮಹತ್ವ ಕೊಟ್ಟರೋ ನುಡಿಗೂ ಅಷ್ಟೇ ಮಹತ್ವ ಕೊಟ್ಟಿದ್ದಾರೆ. 'ಮಾತೆಂಬುದು ಜ್ಯೋತಿರ್ಲಿಂಗ' ಮಾತು ಮಾಣಿಕ್ಯದ ಬೆಳಕಿನಂತೆ, ಹೀಗೆ ನಡೆ-ನುಡಿಗಳ ಸಾಮರಸ್ಯವೇ ಸುಂದರ ಜೀವನದ ಗುಟ್ಟು ಎಂದಿದ್ದಾರೆ. ಇಂಥ ಸರಳ ಸೂತ್ರಗಳು ಇಂದಿನ ಸಾಮಾಜಿಕ ಬದುಕಿನಲ್ಲಿ ಅಳವಡಿಸಿಕೊಳ್ಳುವುದು ಅವಶ್ಯವಿದೆ.

ಒಟ್ಟಾರೆ ಶರಣರು ಈ ಜಗತ್ತಿಗೆ ನೀಡಿದ ಸಂದೇಶ ತತ್ವವೆಂದರೆ **'ಕೂಡಿ ಬಾಳಿದರೆ ಸ್ವರ್ಗಸುಖ', 'ಅರಿತು ನಡೆದರೆ ಜೀವನ', 'ತನ್ನರಿವೇ ತನಗೆ ಗುರು'** ವೈಯಕ್ತಿಕ ಸುಧಾರಣೆಯಲ್ಲಿ ಸಮಾಜದ ಸುಧರಣೆಯೂ ಅಡಗಿದೆ. ವ್ಯಕ್ತಿಯ ಕಲ್ಯಾಣದಲ್ಲಿ ಸಮಾಜಕಲ್ಯಾಣವೂ ಇದೆ. ಅಂದಿನ ಶರಣರ ಆಧ್ಯಾತ್ಮ ಬದುಕು, ಸಮಾಜದ ಹಿತವನ್ನು ಒಳ ಗೊಂಡಿತ್ತು. ಈ ನಿಟ್ಟಿನಲ್ಲಿ ಶರಣರ ಸಾಮಾಜಿಕ ಕೊಡುಗೆ ಅಪಾರವಾದುದಾಗಿದೆ.

❖





# ಕುರುಬ ಗೊಲ್ಲಾಳ

-ರುದ್ರೇಶ್ ಬಿ. ಅದರಂಗಿ *

ಮಹಾತ್ಮ ಬಸವೇಶ್ವರರ ನೇತೃತ್ವದಲ್ಲಿ ೧೨ನೇ ಶತಮಾನದಲ್ಲಿ ನಡೆದ ಚಳುವಳಿಯು ಕಾಯಕಜೀವಿಗಳ ಚಳುವಳಿಯಾಗಿದೆ. ಕಾಯಕ ವರ್ಗದ ಎಲ್ಲ ಜನರು ಚಳುವಳಿಯಲ್ಲಿ ಪಾಲ್ಗೊಂಡರು. ಅಂಬಿಗರ ಚೌಡಯ್ಯ, ಜೇಡರ ದಾಸಿಮಯ್ಯ, ಆಯ್ದಕ್ಕಿ ಮಾರಯ್ಯ, ಆಯ್ದಕ್ಕಿ ಲಕ್ಕಮ್ಮ, ಒಕ್ಕಲಿಗ ಮುದ್ದಣ್ಣ, ಕನ್ನಡಿ ಕಾಯಕದ ಅಮ್ಮಿದೇವಯ್ಯ, ಕೊಟ್ಟಮದ ಸೋಮವ್ವೆ, ಕುರುಬ ವೀರಗೊಲ್ಲಾಳ, ತುರುಗಾಹಿ ರಾಮಣ್ಣ, ನುಲಿಯ ಚಂದಯ್ಯ -ಮೊದಲಾದ ಶರಣರು ಈ ಚಳುವಳಿಯಲ್ಲಿ ಪಾಲ್ಗೊಂಡು ಸಮಾನತೆಯನ್ನು ಸಾಧಿಸಿದರು. ಜೊತೆಗೆ ಎಲ್ಲರೂ ವಚನಗಳನ್ನು ರಚನೆ ಮಾಡಿದ್ದು ಈ ಚಳುವಳಿಯ ಅರ್ಥಸ್ವರೂಪವನ್ನು ವಿಸ್ತರಿಸುತ್ತದೆ.

ಸಂಪರ್ಕ ಮಾಧ್ಯಮ ಅಥವಾ ಸಮೂಹ ಮಾಧ್ಯಮಗಳು ಇಲ್ಲದ ಕಾಲಘಟ್ಟದಲ್ಲಿ ಬಸವಣ್ಣನವರ ವೈಚಾರಿಕ ಕ್ರಾಂತಿಗೆ ಆಕರ್ಷಿತರಾಗಿ ನಾಡಿನ ಎಲ್ಲೆಡೆಯಿಂದ ಕಾಯಕಜೀವಿಗಳು ಕಲ್ಯಾಣಕ್ಕೆ ಆಗಮಿಸಿದರು. ಕಲ್ಯಾಣ ಕೈಲಾಸವಾಯಿತು. ಅಲ್ಲಮಪ್ರಭುಗಳ ಆಗಮನದ ನಂತರ ಅನುಭವ ಮಂಟಪ ಸರ್ವರೂ ತಮ್ಮ ಚಿಂತನೆಗಳನ್ನು ಮುಕ್ತವಾಗಿ ಸಂವಾದ ಮಾಡುವ ವೇದಿಕೆಯಾಯಿತು. ಎಂ.ಆರ್.ಶ್ರೀ.ಯವರು ಹೇಳುವಂತೆ ದೇವಭಾಷೆ ಜನಭಾಷೆಯಾಗದ ಸಂದರ್ಭದಲ್ಲಿ ಜನಭಾಷೆಯೇ ದೇವಭಾಷೆಗೆ ಏರಿದ ಸಂಗತಿ ಸಾಮಾನ್ಯವೇನಲ್ಲ. ಕನ್ನಡದಲ್ಲಿ ಎಲ್ಲರೂ ವಚನಗಳನ್ನು ರಚನೆ ಮಾಡಿದರು. ಏಕಕಾಲದಲ್ಲಿ ಸಾಮೂಹಿಕವಾಗಿ ವಚನ ರಚನೆ ಮಾಡಿದ್ದು ವಿಶ್ವದ ಇತಿಹಾಸದಲ್ಲಿ ಪ್ರಪ್ರಥಮವಾದುದು. ಅಷ್ಟೇ ಅಲ್ಲ, ಈ ರೀತಿಯ ಸಾಮೂಹಿಕ ಚಳುವಳಿ-ವಚನರಚನೆ ಅನನ್ಯವಾದುದಾಗಿದೆ.

ಬಿಜಾಪುರ ಜಿಲ್ಲೆ ಸಿಂದಗಿ ತಾಲ್ಲೂಕಿನ ಗೊಲಗೇರಿಯ ಗ್ರಾಮದ ಹತ್ತಿರವಿರುವ ಢವಲಾರ ಎಂಬ ಗ್ರಾಮದಲ್ಲಿ ಕಾಟಕೋಟ ಎಂಬ ಕುರುಬನಿದ್ದನು. ಇವನ ಇನ್ನೊಂದು ಹೆಸರು ಬಲ್ಲುಗ. ಇವನ ಬಾಲಸಂಗಾತಿ ದುಗ್ಗಲೆ ಅಥವಾ ದುಗ್ಗಳವ್ವ. ಇವರ ಸುಪುತ್ರನೇ ಗೊಲಗೇರಿಯ ವೀರಶರಣ ಕುರುಬ ಗೊಲ್ಲಾಳ ಅಥವಾ ವೀರಗೊಲ್ಲಾಳ. ಬಾಲ್ಯದಿಂದಲೂ ತಮ್ಮ ಕುಲವೃತ್ತಿಯಾದ ಕುರಿಗಳನ್ನು ಮೇಯಿಸುವ ಕಾಯಕವನ್ನು ಮಾಡುತ್ತಿದ್ದ. ಮುಂಜಾನೆಯೇ ಎದ್ದು ಕುರಿಗಳನ್ನು ರೊಪ್ಪದಿಂದ ಹೊಡೆದುಕೊಂಡು ಕಾಡಿನಲ್ಲಿ ಮೇಯಿಸಲು ಹೋಗುತ್ತಿದ್ದ. ಕುರಿಗಳನ್ನು ಮೇಯಲು ಬಿಟ್ಟು ತಾನು ಶಿವಚಿಂತೆ, ಶಿವಧ್ಯಾನದಲ್ಲಿ ತೊಡಗುತ್ತಿದ್ದ. ತಾನು ಕೇಳಿದ ಶಿವಪಾರಮ್ಯದಿಂದ ಆಕರ್ಷಿತನಾಗಿದ್ದ. ಹೀಗೆ ಇರಲು ಒಮ್ಮೆ ಶಿವಭಕ್ತರು ಆ ಮಾರ್ಗವಾಗಿ ಶ್ರೀಶೈಲಕ್ಕೆ ಯಾತ್ರೆಯನ್ನು ಹೋಗುತ್ತಿದ್ದರು. ಎಲ್ಲರೂ ಭಕ್ತಿ ಆವೇಶದಿಂದ 'ಶ್ರೀಶೈಲ ಮಲ್ಲಿಕಾರ್ಜುನ ಉಘೇ ಉಘೇ' ಎಂದು ಕೂಗುತ್ತಾ ನಡೆಯುತ್ತಿದ್ದರು. ಇದನ್ನು ಕಂಡ ಗೊಲ್ಲಾಳ ಭಕ್ತಿ ಆವೇಶದಿಂದ ಆಕರ್ಷಿತನಾದ. ಅವರ ಗುಂಪಿನಲ್ಲಿ ತಾನೂ ಕೂಡ ಸ್ವಲ್ಪ ದೂರ ಶ್ರೀಶೈಲ ಮಲ್ಲಿಕಾರ್ಜುನನಿಗೆ ಉಘೇ ಉಘೇ ಎಂದು ಕೂಗುತ್ತಾ ಮುನ್ನಡೆದ. ಆದರೆ ತನ್ನ ಕಾಯಕದ ಎಚ್ಚರವಾಗಿ ಕೂಡಲೇ ಅಲ್ಲಿಯೇ ನಿಂತ. ಆದರೆ ತಾನು ಶ್ರೀಶೈಲ ಮಲ್ಲಿಕಾರ್ಜುನನನ್ನು ದರ್ಶಿಸಬೇಕೆಂಬ ಆಶೆ ಮಾತ್ರ ತೀರದು. ಇದನ್ನು ಗಮನಿಸಿದ ಆ ಗುಂಪಿನಲ್ಲಿದ್ದ ನಂದಯ್ಯ ಎಂಬ ಶಿವಭಕ್ತನು ಗೊಲ್ಲಾಳನನ್ನು ಆತ್ಮೀಯತೆಯಿಂದ ಮಾತನಾಡಿಸಿದ. ಆಗ ಗೊಲ್ಲಾಳ ತಾನು ಕೂಡಾ ಶ್ರೀಶೈಲ ಮಲ್ಲಿಕಾರ್ಜುನನನ್ನು ನೋಡಬೇಕೆಂಬ ಆಸೆಯಿದೆ. ಆದರೆ ಕುರಿಗಳನ್ನು ಮೇಯಿಸುವ ಕಾಯಕ ನನ್ನದಾಗಿದೆ. ಹೇಗಾದರೂ ಮಾಡಿ ನನಗೆ ಶ್ರೀಶೈಲ ಮಲ್ಲಿಕಾರ್ಜುನನ ದರ್ಶನ ಮಾಡಿಸಿ ಎಂದು ಗೋಗರೆದ. ಈ ಸಂದರ್ಭದಲ್ಲಿ ನಂದಯ್ಯ-ನೀನೇನು

* ನಂ. ೧೬, ೩ನೇ ಅಡ್ಡರಸ್ತೆ, ೨ನೇ ಮುಖ್ಯರಸ್ತೆ, ವಿಠ್ಠಲನಗರ, ಚಾಮರಾಜಪೇಟೆ, ಬೆಂಗಳೂರು-೫೬೦೦೧೮

ಭಾರತೀಯ ಸಮಾಜದಲ್ಲಿ ಶರಣರಿಗಿಂತ ಮುಂಚೆ ಸ್ತ್ರೀ ಗೌರವ ಎನ್ನುವುದು ಕೆಲವು ಸಲ ಎಲ್ಲಿ ಸ್ತ್ರೀಯರು ಪೂಜೆಗೊಳ್ಳುತ್ತಾರೋ ಅಲ್ಲಿ ದೇವತೆಗಳು ನೆಲೆಸಿರುತ್ತಾರೆ ಎಂಬ ಮಾತು ಕೇವಲ ಪೊಳ್ಳು ಘೋಷಣೆಯಾಗಿದ್ದಿತು. ಇಲ್ಲವೇ ಪತ್ನಿಯ ಕೈಯಿಂದ ಪತಿಯೇ ದಾನಧರ್ಮ ಮಾಡಿಸುವಂತೆ ನಾಟಕೀಯ ಪ್ರವೃತ್ತಿ ಇತ್ತು. ಇನ್ನೂ ಕೆಲವು ಸಲ ಆಡಳಿತ ಇತ್ಯಾದಿ ಕ್ಷೇತ್ರಗಳಲ್ಲಿ ಮಹಿಳೆ ತನ್ನ ಸಾಮರ್ಥ್ಯ ಮೆರೆದಿದ್ದಳು. ಅದು ಕೇವಲ ಪ್ರಾಪಂಚಿಕಕ್ಕೆ ಸೀಮಿತ ವಾಗಿದ್ದಿತು. ಶರಣರು ಮಹಿಳೆಯರ ಸ್ಥಾನವನ್ನು ಪ್ರಾಪಂಚಿಕ ಸ್ತರದಿಂದ ಪಾರಮಾರ್ಥಿಕ ದವರೆಗೂ ವಿಸ್ತರಿಸಿದರು. ಅವಳಿಗೆ ಪುರುಷರಿಗೆ ಸಮಾನ ಸ್ಥಾನವನ್ನು ದೊರಕಿಸಿಕೊಟ್ಟರು. ಶರಣರ ಚಳುವಳಿ ಕರ್ನಾಟಕ ದಲ್ಲಿಯಷ್ಟೇ ಅಲ್ಲ ಭಾರತದಲ್ಲಿಯೇ ಸ್ತ್ರೀಪರ ವಾದ ಪ್ರಪ್ರಥಮ ಚಳುವಳಿಯೆನಿಸಿಕೊಂಡಿತು. 'ಹೆಣ್ಣು ಹೆಣ್ಣಲ್ಲ, ಹೆಣ್ಣು ರಕ್ಕಸಿಯಲ್ಲ, ಹೆಣ್ಣು ಸಾಕ್ಷಾತ್ ಕಪಿಲಸಿದ್ಧ ಮಲ್ಲಿನಾಥ' ಎಂದು ಸಿದ್ಧರಾಮ ಶರಣರು ಹೇಳಿದರೆ, ಪ್ರಭುಗಳು ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆ ಯಲ್ಲ, ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರಾ' ಎಂದಿದ್ದಾರೆ. ಅದೇ ರೀತಿ ದಾಸಿಮಯ್ಯನವರು –'ಒಳಗೆ ಸುಳಿವ ಆತ್ಮ ಗಂಡೂ ಅಲ್ಲ, ಹೆಣ್ಣೂ ಅಲ್ಲ' ಆತ್ಮಕ್ಕೆ ಲಿಂಗಭೇದವಿಲ್ಲವೆಂದಿದ್ದಾರೆ. ಶರಣರ ಈ ಚಳುವಳಿಯ ಪರಿಣಾಮವಾಗಿ ಅದೆಷ್ಟೋ ಸ್ತ್ರೀಯರು ಅನುಭವ ಮಂಟಪಕ್ಕೆ ಬಂದು ತಮ್ಮ ಅಭಿವ್ಯಕ್ತಿ ಸ್ವಾತಂತ್ರ್ಯ ವನ್ನು ಘೋಷಿಸಿಕೊಂಡರು.

ಅಕ್ಕಮಹಾದೇವಿ, ನೀಲಾಂಬಿಕೆ, ಗಂಗಾಂಬಿಕೆ, ಮೋಳಿಗೆ ಮಹಾದೇವಿ, ಆಯ್ದಕ್ಕಿ ಲಕ್ಕಮ್ಮ, ಸತ್ಯಕ್ಕ, ಗೊಗ್ಗವ್ವೆ, ಕದಿರೆ ರೆಮ್ಮವ್ವೆ, ಮುಕ್ತಾಯಕ್ಕ ಆಮುಗೆ ರಾಯಮ್ಮ, ಲಿಂಗಮ್ಮ ಹೀಗೆ ಮೇಲ್ವರ್ಗ, ಮಧ್ಯಮವರ್ಗ, ಕೆಳವರ್ಗದ ಎಲ್ಲಾ ಮಹಿಳೆಯರು ಶರಣೆಯರೆಂಬ ಒಂದೇ ಸಮುದಾಯಕ್ಕೆ ಸೇರಿದರು. ಜಾತಿ, ಕುಲ, ಧರ್ಮ, ಲಿಂಗ, ಭವಿ, ಭಕ್ತ, ಸ್ವರ್ಗ, ನರಕ, ದೇವರು, ನೈತಿಕತೆ, ಶೀಲ, ಆಚರಣೆಗಳು, ಮೂಢ ನಂಬಿಕೆ, ಡಾಂಭಿಕತೆ ಇತ್ಯಾದಿಯಾಗಿ ಆಧ್ಯಾತ್ಮ ಸಾಧನೆ ಮತ್ತು ಸಾಮಾಜಿಕ ವಿಡಂಬನೆ ಎರಡರಲ್ಲಿಯೂ ತೊಡಗಿಸಿ ಕೊಂಡು ಅನುಭವದಲ್ಲಿ ಕೆಲವೊಂದು ಸಂದರ್ಭದಲ್ಲಿ ಪುರುಷರನ್ನು ಮೀರಿಸಿದವರೂ ಇದ್ದಾರೆ.

ಅನುಭಾವದಲ್ಲಿ ಅಕ್ಕಮಹಾದೇವಿ ನಿಸ್ಸೀಮಳು. ಭಾವ ತೀವ್ರತೆ, ಅನುಭವ ಗಮ್ಯತೆಯಿಂದ ಕೂಡಿದ ಅಕ್ಕನ ವಚನ ಗಳಿಗೆ ತನ್ನದೇ ಆದ ವೈಶಿಷ್ಟ್ಯವಿದೆ.

'ಹೆಣ್ಣು, ಮಾಯೆಯೆಂದು ದೂಷಿಸುವ ಸಮಾಜಕ್ಕೆ, ಪುರುಷ ವರ್ಗಕ್ಕೆ ತಕ್ಕ ಉತ್ತರ ನೀಡುವಲ್ಲಿ ಹೀಗೆ ನುಡಿದಿದ್ದಾಳೆ

*ಪುರುಷನ ಮುಂದೆ ಮಾಯೆ ಸ್ತ್ರೀಯೆಂಬ ಅಭಿಮಾನ*
*ವಾಗಿ ಕಾಡಿತ್ತು ಮಾಯೆ*
*ಸ್ತ್ರೀಯ ಮುಂದೆ ಮಾಯೆ, ಪುರುಷನೆಂಬ ಅಭಿಮಾನ*
*ವಾಗಿ ಕಾಡಿತ್ತು ಮಾಯೆ*
*ಲೋಕವೆಂಬ ಮಾಯೆಗೆ ಶರಣ ಚಾರಿತ್ರ್ಯ ಮರುಳಾಗಿ*
*ತೋರಿತ್ತು*
*ಚೆನ್ನಮಲ್ಲಿಕಾರ್ಜುನನೆಂಬ ಶರಣಂಗೆ ಮಾಯೆಯಿಲ್ಲ*
*ಮೇರು ಇಲ್ಲ, ಅಭಿಮಾನವೂ ಇಲ್ಲ'* ಎಂದಿದ್ದಾಳೆ.

ಇನ್ನೊಬ್ಬ ಶರಣೆ 'ಮುಕ್ತಾಯಕ್ಕ' ಸುಮ್ಮನೇಕೆ ದಿನ ಕಳೆವಿರಿ ಸುಮ್ಮನೇಕೆ ಹೊತ್ತುಗಳೆವಿರಿ, ಸುಮ್ಮನೇಕೆ ಹೊತ್ತು ಗಳೆವಿರಿ ಸ್ವಾಮಿಗಳಿರಾ? ಮಾಡಬನ್ನಿ ದಿನ ಶಿವರಾತ್ರಿಯ, ಕೇಳಬನ್ನಿ ಶಿವಾನುಭವವ ನೋಡಬಲ್ಲಿ ಅಜಗಣ್ಣನಿರುವ ಬಸವಣ್ಣ ತಂದೆ' ಎಂದು ಹೇಳುವಲ್ಲಿ ವ್ಯರ್ಥ ಕಾಲಹರಣ ಮಾಡುವ ಪುರುಷರನ್ನು ಬಡಿದೆಬ್ಬಿಸುವ ಮತ್ತು ಮೈಮರೆತವ ರನ್ನು ಎಚ್ಚರಿಸುವ ಕಾರ್ಯದಲ್ಲಿ ತೊಡಗಿ, ಅವರನ್ನು ಭಕ್ತಿ ಮಾರ್ಗಕ್ಕೆ ಕರೆತರುವ ನಿಟ್ಟಿನಲ್ಲಿ ಹೇಳಿದ್ದಾಳೆ. ಅದೇ ರೀತಿ 'ಆಯ್ದಕಿ ಲಕ್ಕಮ್ಮ' ತನ್ನ ಪತಿ ಅಧಿಕ ಅಕ್ಕಿಯನ್ನು ಆಯ್ದು ತಂದಾಗ, ಪತಿಗೆ ಮಾರ್ಗದರ್ಶನ ನೀಡುವಲ್ಲಿ ಆಧ್ಯಾತ್ಮದಲ್ಲಿ ತೊಡಗಿದ್ದಾಳೆ.

*'ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯಾ*
*ರೋಷವೆಂಬುದು ಯಮದೂತರಿಗಲ್ಲದೆ*
*ಅಜಾತರಿಗುಂಟೆ ಅಯ್ಯಾ*
*ಈಸನಕ್ಕಿಯಾಸೆ ನಿಮಗೇಕೆ ? ಈಶ್ವರನೊಪ್ಪ*
*ಮಾರಯ್ಯಪ್ರಿಯ ಅಮರೇಶ್ವರಲಿಂಗಕ್ಕೆ ದೂರ'*

ಆಸೆಯೆಂಬುದು ಶರಣನಾದ ನಮಗೆ ಇರಬಾರದು ಎಂಬ ಸಲಹೆ ಸೂಚನೆಗಳನ್ನು ನೀಡಿದ್ದಾಳೆ ಶಿವಶರಣೆ ಲಕ್ಕಮ್ಮ. ಅದೇ ರೀತಿ ಬಸವಣ್ಣನವರ ಪತ್ನಿ ನೀಲಾಂಬಿಕೆಯನ್ನು ಬಸವಣ್ಣನವರು ಲಿಂಗೈಕ್ಯ ಸಂದರ್ಭದಲ್ಲಿ ಕಪ್ಪಡಿ ಸಂಗಮಕ್ಕೆ ಬರುವಂತೆ ಅಪ್ಪಣ್ಣನನ್ನು ಹೇಳಿಕಳಿಸಿದಾಗ ಅವಳು ಹೇಳುವ ಮಾತು ಮನನೀಯವಾಗಿದೆ.





*ನೋಡು, ನೋಡು, ನೋಡು, ನೋಡು ಲಿಂಗವೇ*
*ನೋಡು ಬಸವಯ್ಯ ಮಾಡಿದಾಟವ*
*ಅಲ್ಲಿಗೆನ್ನನು ಬರಹೇಳಿದರಂತೆ*
*ಅಲ್ಲಿರುವ ಸಂಗಯ್ಯ ಇಲ್ಲಿಲ್ಲವೆ ?*

ಬಸವಣ್ಣನವರು ಮೈಮರೆತು ಮಾತನಾಡಿದಾಗ ನೀಲಾಂಬಿಕೆ ಅವರನ್ನು ಎಚ್ಚರಿಸುತ್ತಾಳೆ. ಆಧ್ಯಾತ್ಮದ ಆಳ ವನ್ನು ಸೂಕ್ಷ್ಮವಾಗಿ ಅರುಹಿದ ನೀಲಾಂಬಿಕೆ ಬಸವಣ್ಣ ನವರನ್ನು ಅನುಭವದಲ್ಲಿ ಮೀರಿಸಿದ್ದು ಇಲ್ಲಿ ಕಂಡುಬರುತ್ತದೆ

ವ್ರತನಿಷ್ಠೆಯ ಕುರಿತು ಸತ್ಯಕ್ಕ ನುಡಿದದ್ದು ಹೀಗೆ–

*ಲಂಚ ವಂಚನಕ್ಕೆ ಕೈಯಾನದ ಭಾಷೆ*
*ಬಟ್ಟೆಯಲ್ಲಿ ಹೊನ್ನು ವಸ್ತ್ರ ಬಿದ್ದಿದಡೆ*
*ಕೈಮುಟ್ಟಿ ಎತ್ತಿದೆನಾದಡೆ*
*ಅಮ್ಮಾ ನಿಮ್ಮಾಣೆ*
*ನೀವಿಕ್ಕಿದ ಭಿಕ್ಷೆಯೊಳಗಿಪ್ಪೆನಯ್ಯ'*

ಆತ್ಮಸಾಕ್ಷಿಯಾದ, ಪ್ರಾಮಾಣಿಕವಾದ ಪರಿಪಕ್ವತೆ ಇಲ್ಲಿದೆ. ಅದೇ ರೀತಿ ಸ್ವಾಭಿಮಾನಿಯಾದ ಆಮುಗೆ ರಾಯಮ್ಮ ತನ್ನ ಕಟುವಾದ ನುಡಿಗಳಿಂದ ಭವಿವರ್ಗವನ್ನು ಹೀಗೆ ಖಂಡಿಸಿದ್ದಾಳೆ.

*ಮದ್ಯಮಾಂಸವ ಭುಂಜಿಸುವವರು ಅನಾಚಾರಿಗಳು*
*ಆವಕುಲವಾದಡೇನು ? ಅಂಗದ ಮೇಲೆ*
*ಲಿಂಗವುಳ್ಳವರೆಲ್ಲರು*
*ಆಚಾರವುಳ್ಳವರೆಂಬೆನಯ್ಯಾ'*

ಅಂಗದ ಮೇಲೆ ಲಿಂಗವುಳ್ಳವರೆಲ್ಲರು ಆಚಾರವಂತರು. ಅವರೇ ಭಕ್ತರು, ಮದ್ಯಮಾಂಸ ತಿನ್ನುವವರೇ ಭವಿಗಳು. ಹೀಗೆ ಭಕ್ತವರ್ಗ ಮತ್ತು ಭವಿಮಾರ್ಗವನ್ನು ಅವರವರ ನಡೆ–ನುಡಿ ಆಚಾರಗಳಿಂದ ಗುರುತಿಸಿದ್ದಾಳೆ.

ಕುಲಜಾತಿ ಭೇದದ ಕುರಿತಾಗಿಯೂ ಶರಣೆಯರು ವಚನಗಳಲ್ಲಿ ಮಾರ್ಮಿಕವಾಗಿ ಚರ್ಚಿಸಿದ್ದಾರೆ. ಕದಿರೆ ರೆಮ್ಮವ್ವೆ ಪ್ರಶ್ನೆ ಎತ್ತಿದ್ದು ಹೀಗಿದೆ,

*ನಾ ತಿರುಹದ ರಾಟೆಯ*
*ಕುಲ ಜಾತಿಯ ಕೇಳಿರಣ್ಣಾ*
*ಅಡಿಯ ಹಲಗೆ ಬ್ರಹ್ಮ, ತೋರಣ ವಿಷ್ಣು*
*ನಿಂದ ಬೊಂಬೆ ಮಹಾರುದ್ರ*
*ರುದ್ರನ ಬೆಂಬಳಿಯವೆರಡು ಸೂತ್ರಕರ್ಣ*
*ಅರಿವೆಂಬ ಕದಿರು, ಭಕ್ತಿಯೆಂಬ ಕೈಯಲ್ಲಿ ತಿರುಹಲಾಗಿ*
*ಸುತ್ತಿತು ನೂಲು ಕದಿರು ತುಂಬಿತ್ತು.*

ನೀವೆಲ್ಲ ನನ್ನ ಕುಲದ ಬಗ್ಗೆ ಕೇಳುವಿರಿ ವಿನಃ ನಾ ತಿರುಹುವ ರಾಟೆಯ ಕುಲವನ್ನು ಕೇಳಲಾರಿರಿ ಎಂಬ ವಿವರಣೆಯನ್ನು ನೀಡುತ್ತಾಳೆ ಗಜೇಶ ಮಸಣಯ್ಯಗಳ ಪುಣ್ಯಸ್ತ್ರೀ ಲಿಂಗ ತಾರತಮ್ಯವನ್ನು ವಿಮರ್ಶಿಸಿದ್ದಾಳೆ

*ಹೊನ್ನಬಿಟ್ಟು ಲಿಂಗವನೊಲಿಸಬೇಕೆಂಬರು*
*ಹೊನ್ನಿಗೆಯಲ್ಲಾ, ಲಿಂಗಕ್ಕೆಯೂ ವಿರುದ್ಧವೇ ?*
*ಹೆಣ್ಣು ಬಿಟ್ಟು ಲಿಂಗವನೊಲಿಸಬೇಕೆಂಬರು*
*ಹೆಣ್ಣಿಗೆಯೂ ಲಿಂಗಕ್ಕೆಯೂ ವಿರುದ್ಧವೇ ?*

ಎಂದು ಗಟ್ಟಿಯಾಗಿ, ದಿಟ್ಟತನದಿಂದ ಹೆಣ್ಣನ್ನು ಇಲ್ಲದ ನೆಪದಿಂದ ಅಲ್ಲಗಳೆಯುವ ಪುರುಷವರ್ಗಕ್ಕೆ ತಕ್ಕ ಪ್ರಶ್ನೆ ಹಾಕಿದ್ದಾಳೆ.

ಕಾಯಕನಿಷ್ಠರಾಗಿ, ಪತಿಗೆ ತಕ್ಕ ಸತಿಯರಾಗಿ, ಆಧ್ಯಾತ್ಮ ಸಾಧನೆಯಲ್ಲಿ ಮತ್ತು ಸಾಂಸಾರಿಕ ಜೀವನದಲ್ಲಿ ಸಮಭಾಗಿ ಯಾಗಿ, ಸಮಾಜಮುಖಿಯಾದ ಚಿಂತನೆಯಲ್ಲಿ ತೊಡಗಿದರು. ಸತಿಪತಿಗಳು ಒಂದಾಗಿ ಮಾಡುವಭಕ್ತಿ ಶಿವಂಗೆ ಹಿತವೆನಿಸುವುದು. ದಾಸಿಮಯ್ಯ ಶರಣರು ಈ ಕುರಿತು ತಮ್ಮ ಒಂದು ವಚನದಲ್ಲಿ ಹೀಗೆ ಹೇಳಿದ್ದಾರೆ–

*'ಸತಿ–ಪತಿಗಳೊಂದಾದ ಭಕ್ತಿ, ಹಿತವಪ್ಪುದು ಶಿವಂಗೆ*
*ಸತಿಪತಿಗಳೊಂದಾಗದವನ ಭಕ್ತಿ*
*ಅಮೃತದೊಳು ವಿಷ ಬೆರಸಿದಂತೆ*
*ಕಾಣಾ ರಾಮನಾಥ'* ಎಂದು ಹೇಳಿದ್ದಾರೆ.

ಹಾಗೆ 'ಗಂಡ ಶಿವಲಿಂಗದೇವರ ಭಕ್ತ, ಹೆಂಡತಿ ಮಾರಿಮಸಣಿಯ ಭಕ್ತೆ ಗಂಡಕೊಂಬುದು ಪಾದೋದಕ ಪ್ರಸಾದ, ಹೆಂಡತಿ ಕೊಂಬುದು ಸುರೇಮಾಂಸ ಬಾಂಡ–ಭಾಜನ ಶುದ್ಧ ವಿಲ್ಲದವನ ಭಕ್ತಿ ಹೆಂಡದ ಮಡಕೆಯ ಹೊರಗೆ ತೊಳೆದಂತೆ' ಎಂದು ಹೇಳುತ್ತಾ ತಾಳ–ಮೇಳವಿಲ್ಲ ಸಂಸಾರ, ಹೊಂದಾಣಿಕೆ ಇಲ್ಲದ ಭಕ್ತಿಯನ್ನು ಶಿವನು ಒಪ್ಪುವುದಿಲ್ಲ ವೆಂದು ಶರಣರು ಸಂಸಾರದಲ್ಲಿದ್ದುಕೊಂಡೇ ಪಾರಮಾರ್ಥ ವನ್ನು ಸಾಧಿಸ ಹೊರಟರು. ದಾಂಪತ್ಯವನ್ನು ಉದಾತ್ತೀಕರಿಸಿ ನೋಡಿದರು.

ಕಾಯಕ–ದಾಸೋಹದ ಮಹತ್ವವನ್ನು ಲೋಕಕ್ಕೇ ಸಾರಿದ ಶರಣರು, ಆರ್ಥಿಕ ಅಭಿವೃದ್ಧಿಗೆ ಕಾಯಕವೇ

# ಕನ್ನಡ ಪಂಡಿತ್ ಪದವಿ ಶಿಕ್ಷಣಕ್ಕೆ ಜೀವ ತುಂಬಿದ ಶ್ರೀ ಸಿದ್ಧಗಂಗಾಮಠ

ಕನ್ನಡಕ್ಕೆ ಜೀವ ತುಂಬಬಲ್ಲ ಕೋರ್ಸ್‌ನ್ನೇ ರಾಜ್ಯ ಸರಕಾರ ಮುಚ್ಚಲು ಹೊರಟಾಗ ಹೋರಾಟ ಮಾಡಿ ಎತ್ತಿ ನಿಲ್ಲಿಸಿದವರು ಸಿದ್ಧಗಂಗಾಶ್ರೀಗಳು. ಸಿದ್ಧಗಂಗಾಮಠದಲ್ಲಿ ಬಿ.ಎ. ಇಂಟಿಗ್ರೇಟೆಡ್ ಕನ್ನಡ ಪಂಡಿತ ಕಾಲೇಜು ಇದೆ. ಇಲ್ಲಿರುವುದು ರಾಜ್ಯದಲ್ಲೇ ವಿಶಿಷ್ಟ ಕೋರ್ಸ್ ಮತ್ತು ರಾಜ್ಯದ ಏಕೈಕ ಕಾಲೇಜು !

ಪ್ರಾಚೀನ ಪರಂಪರೆಯಲ್ಲಿ ಶಿಕ್ಷಣ ನೀಡುವ ಉದ್ದೇಶದಿಂದ 1894ರಲ್ಲಿ ಮೈಸೂರು ನಾಲ್ವಡಿ ಕೃಷ್ಣರಾಜ ಒಡೆಯರ್ ಆರಂಭಿಸಿದ ಸರಕಾರಿ ಕನ್ನಡ ಪಂಡಿತ ಸಂಸ್ಥೆಯನ್ನು 100 ವರ್ಷಗಳ ಬಳಿಕ ಎಸ್. ಬಂಗಾರಪ್ಪ ಮುಖ್ಯಮಂತ್ರಿಯಾಗಿದ್ದ ಅವಧಿಯಲ್ಲಿ ಸರಕಾರ ಮುಚ್ಚಿಬಿಟ್ಟಿತು. ಇದೇ ಕನ್ನಡ ಪಂಡಿತ ಮಾದರಿಯಲ್ಲಿ ಇಲ್ಲಿನ ಸಿದ್ಧಗಂಗಾ ಮಠ 1965ರಿಂದ ಶಿಕ್ಷಣ ನೀಡುತ್ತಿದೆ. ಖಾಸಗಿ ಶಿಕ್ಷಣ ಸಂಸ್ಥೆ ಕನ್ನಡ ಪಂಡಿತ ಕೋರ್ಸ್ ಹೊಂದಿರುವುದು ರಾಜ್ಯದಲ್ಲೇ ಪ್ರಥಮ. ಈ ಕನ್ನಡ ಪಂಡಿತ ಕೋರ್ಸ್‌ನ್ನು ಸಹ ಮುಚ್ಚಲು ಸರಕಾರ ಆದೇಶಿಸಿತ್ತು. ಆದರೆ ಇದಕ್ಕೆ ಅವಕಾಶ ಕೊಡದ ಶ್ರೀ ಶಿವಕುಮಾರಸ್ವಾಮಿಗಳು, ನ್ಯಾಯಾಲದ ಮೊರೆ ಹೋಗಿದ್ದರು. ನ್ಯಾಯಾಲಯ, ಸರಕಾರ ಮಟ್ಟದಲ್ಲಿ ಹೋರಾಡಿ ಕೋರ್ಸ್‌ಗೆ ಹೊಸ ರೂಪ ಕೊಡಿಸುವಲ್ಲಿ ಯಶಸ್ವಿಯಾಗಿದ್ದಾರೆ. ಕನ್ನಡ ಪಂಡಿತ ಕೋರ್ಸ್ ಈಗ 'ಬಿ.ಎ. ಇಂಟಿಗ್ರೇಟೆಡ್ ಕನ್ನಡ ಪಂಡಿತ ಪದವಿ' ಎಂದು ಬದಲಾಗಿದೆ. ಇತರ ಪದವಿಗೆ ತತ್ಸಮಾನ ಕೋರ್ಸ್ ಆಗಿ ಪರಿಗಣಿಸಲಾಗಿದೆ. ತುಮಕೂರು ವಿಶ್ವವಿದ್ಯಾಲಯವು ಇದಕ್ಕೆ ಮಾನ್ಯತೆ ನೀಡಿದೆ. 2006–07ನೇ ಸಾಲಿನಿಂದ ವಿದ್ಯಾರ್ಥಿಗಳಿಗೆ ಪ್ರವೇಶ ಸಹ ನಡೆಯುತ್ತಿದೆ. ಎಸ್.ಎಸ್.ಎಲ್.ಸಿ. ಬಳಿಕ ಪ್ರವೇಶ ಪಡೆದು ಐದು ವರ್ಷ ಅಧ್ಯಯನ ಮಾಡುವ ಕೋರ್ಸ್ ಇದಾಗಿದೆ. ಕನ್ನಡ, ಸಂಸ್ಕೃತ, ಇತಿಹಾಸ, ಇಂಗ್ಲೀಷ್ ಎಲ್ಲವನ್ನೂ ಅಧ್ಯಯನ ಮಾಡುವ ವಿಶಿಷ್ಟ ಅವಕಾಶ ಇದಾಗಿದೆ.

## ಬಿ.ಎ. ಇಂಟಿಗ್ರೇಟೆಡ್ ಕನ್ನಡ ಪಂಡಿತ್ ಪದವಿ ಶಿಕ್ಷಣಕ್ಕೆ ಸುವರ್ಣಾವಕಾಶ

೧. ಎಸ್.ಎಸ್.ಎಲ್.ಸಿ. ತೇರ್ಗಡೆಯಾದವರಿಗೆ ಅವಕಾಶವಿದೆ.

೨. ಐದು ವರ್ಷಗಳ ಬಿ.ಎ. ಇಂಟಿಗ್ರೇಟೆಡ್ ಕನ್ನಡ ಪಂಡಿತ ಪದವಿ ಶಿಕ್ಷಣದಲ್ಲಿ ಹತ್ತು ಸೆಮಿಸ್ಟರ್ ಪರೀಕ್ಷೆಗಳಿರುತ್ತವೆ.

೩. ಈ ಪದವಿ ಶಿಕ್ಷಣದಲ್ಲಿ ತೇರ್ಗಡೆ ಹೊಂದಿದ ಅಭ್ಯರ್ಥಿಗಳಿಗೆ ಉನ್ನತ ವ್ಯಾಸಂಗಕ್ಕೆ (ಬಿ.ಇಡಿ., ಕನ್ನಡ, ಸಂಸ್ಕೃತ, ಇತಿಹಾಸ, ಇಂಗ್ಲೀಷ್ ಇವುಗಳಲಿ ಯಾವುದಾದರೊಂದು ವಿಷಯ ಆಯ್ಕೆಮಾಡಿಕೊಂಡು ಎಂ.ಎ ಮಾಡಬಹುದು. ಹಾಗೆಯೇ ಎಂ.ಇಡಿ., ಕೆ.ಎ.ಎಸ್., ಕೆ.ಇ.ಎಸ್. ಐ.ಎ.ಎಸ್. ಇತ್ಯಾದಿ ಯಾವುದೇ ಸ್ಪರ್ಧಾತ್ಮಕ ಪರೀಕ್ಷೆ ಬರೆಯುವ ಅವಕಾಶವಿದೆ.

೪. ಈ ಬಿ.ಎ. ಪದವಿ ಶಿಕ್ಷಣ ಪಡೆದ ಬಿ.ಇಡಿ॰ತರಬೇತಿ ಹೊಂದಿದ ಶಿಕ್ಷಣಾರ್ಥಿಗಳಿಗೆ ಸರ್ಕಾರಿ ಹಾಗೂ ಖಾಸಗಿ ಪ್ರೌಢಶಾಲೆಗಳಲ್ಲಿ ಹೆಚ್ಚಿನ ಆದ್ಯತೆಯೊಂದಿಗೆ ಶಿಕ್ಷಕರ ನೇಮಕಾತಿಗೆ ಅವಕಾಶವಿರುತ್ತವೆ.

೫. ಕಛೇರಿಗಳಲ್ಲಿ ಭಾಷಾಂತರಕಾರರಾಗಲು, ಟಿಪ್ಪಣಿ ಬರಹಗಾರರಾಗಲು ಅವಕಾಶಗಳಿದ್ದು, ಅದಕ್ಕನುಗುಣವಾದ ಆಧುನಿಕವಾದ ಕಂಪ್ಯೂಟರ್ ಶಿಕ್ಷಣ, ಕರಡುಪ್ರತಿ ತಿದ್ದುವಿಕೆ, ಸಂವಹನ ಕನ್ನಡ, ಲೇಖನ ಕಲೆಯ ಪತ್ರಿಕೆಗಳಿರುತ್ತವೆ. ಕಛೇರಿ ವ್ಯಾವಹಾರಿಕ ಪತ್ರರಚನೆಗಳ ಪರಿಚಯವಿರುತ್ತದೆ. ಹೀಗಾಗಿ ಭಾಷಾಧ್ಯಾಪಕರು ಸಮರ್ಥರಾಗಿರಬೇಕೆಂಬ ಸೈದ್ಧಾಂತಿಕ ನೆಲೆಯಲ್ಲಿ ಕನ್ನಡ ಪಂಡಿತ ಪದವೀಧರರಿಗೆ ಹೆಚ್ಚಿನ ಉದ್ಯೋಗಾವಕಾಶಗಳಿರುತ್ತವೆ.

೬. ಪಠ್ಯವಸ್ತುವಿನಲ್ಲಿ ಇಂಗ್ಲೀಷ್ ಸೇರ್ಪಡೆಯಿಂದಾಗಿ ವ್ಯಾವಹಾರಿಕ ಹಾಗೂ ಔದ್ಯೋಗಿಕವಾಗಿ ಅನುಕೂಲವಾಗಲಿದೆ. ಮನೋವಿಕಾಸ, ಕಲಿಕೆಯ ಅನುಭವ ವಿಸ್ತಾರಕ್ಕೆ ಅವಕಾಶವಿದೆ.

೭. ಸಂಸ್ಕೃತ, ಇಂಗ್ಲೀಷ್ ಜೊತೆಗೆ ಹೆಚ್ಚಿನ ಕನ್ನಡ ಸಾಹಿತ್ಯ ಪ್ರಕಾರದ ಜೊತೆಗೆ ಇತಿಹಾಸವನ್ನು ಅಭ್ಯಸಿಸಿ ಪ್ರೌಢಶಾಲೆಯಲ್ಲಿ ಸಮರ್ಥ ಕನ್ನಡ–ಇತಿಹಾಸ ಬೋಧಕರಾಗಿ ಹುದ್ದೆ ಪಡೆಯಲು ಸಾಧ್ಯವಿದೆ.

೮. ಪಠ್ಯವಸ್ತುವಿನಲ್ಲಿ ಭಾಷಾಕೌಶಲ್ಯವರಿತು ವ್ಯವಹಾರ ಜ್ಞಾನ ಹೆಚ್ಚಿಸುವ ಸೃಜನಾತ್ಮಕ ಚಿಂತನೆಗೆ ಅನುವಾಗುವ ಅಂಶಗಳಿಗೆ ಒತ್ತು ನೀಡಲಾಗುವುದು.

೯. 'ಮುಂಬರುವ ದಿನಗಳಲ್ಲಿ ಕನ್ನಡ ಪಂಡಿತ ಮೌಲಿಕ ಶಿಕ್ಷಣ ತರಬೇತಿ ಶಿಕ್ಷಣದಲ್ಲಿ ಅತಿ ಮಹತ್ವವನ್ನು ಪಡೆಯುವ ಪದವಿಯಾಗಲಿದೆ' ಎಂಬುದು ಈ ಪಠ್ಯವಸ್ತು ರಚನಾ ಸಮಿತಿ, ಶಿಕ್ಷಣತಜ್ಞರ ತೀರ್ಮಾನವಾಗಿದೆ.

೧೦. ಹೆಚ್ಚಿನ ಮಾಹಿತಿಗಾಗಿ ಕನ್ನಡ ಪಂಡಿತ್ ಶಿಕ್ಷಣ ವಿಭಾಗದ ಮುಖ್ಯಸ್ಥರನ್ನು ಕಛೇರಿ ವೇಳೆ ಸಂಪರ್ಕಿಸುವುದು.
ದೂರವಾಣಿ : **0816–2282211, 9980188339.**

ಆಸಕ್ತ ವಿದ್ಯಾರ್ಥಿಗಳು ಈ ಮೇಲಿನ ನೂತನ ಪಠ್ಯಕ್ರಮದ ಬಿ.ಎ. ಇಂಟಿಗ್ರೇಟೆಡ್ ಕನ್ನಡ ಪಂಡಿತ್ ಪದವಿ ಶಿಕ್ಷಣದ ಅವಕಾಶವನ್ನು ಪಡೆಯಬೇಕೆಂದು ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾಸ್ವಾಮೀಜಿ ಯವರು ಶ್ರೀಮಠದ ಪ್ರಕಟಣೆಯಲ್ಲಿ ತಿಳಿಸಿದ್ದಾರೆ.







# ಶರಣರ ಸಾಮಾಜಿಕ ಕೊಡುಗೆ

–ಪ್ರೊ. ಶ್ರೀಮತಿ ಬಿ.ಎಸ್. ಗಂಗನಳ್ಳಿ *

ಭವ್ಯ ಭಾರತದ ಇತಿಹಾಸದಲ್ಲಿ ಹನ್ನೆರಡನೆಯ ಶತಮಾನದ ಶಿವಶರಣರ ಸಮಾಜೋಧಾರ್ಮಿಕ ಚಳುವಳಿಗೆ ತನ್ನದೇ ಆದ ಒಂದು ಮಹತ್ವವಿದೆ. ಕಾಯಕಯೋಗಿ, ಭಕ್ತಿಭಂಡಾರಿ, ಆಧ್ಯಾತ್ಮಯೋಗಿ ಬಸವಣ್ಣನವರ ನೇತೃತ್ವದಲ್ಲಿ ಅಂದಿನ ಶರಣರೆಲ್ಲ ಒಂದುಗೂಡಿ ತಮ್ಮ ಕಣ್ಣೆದುರಿಗಿನ ಸಮಾಜದಲ್ಲಿ ಪ್ರಚಲಿತದಲ್ಲಿದ್ದ, ವರ್ಣಭೇದ–ವರ್ಗಭೇದ–ಲಿಂಗಭೇದಗಳ ಸಂಕೀರ್ಣ ಸಮಾಜವನ್ನು ಒಡೆದು, ಸಂಪೂರ್ಣ ಸಮಾನತೆಯ ಕನಸನ್ನು ಕಂಡರು. ಮೇಲು–ಕೀಳು, ಬಡವ ಬಲ್ಲಿದ, ಸ್ತ್ರೀ–ಪುರುಷ ವ್ಯವಸ್ಥೆಯ ನಡುವಿನ ಅಂತರ ಕಿತ್ತೊಗೆದು, ಸರ್ವರಿಗೂ ಸಮಾನತೆಯ ಬದುಕನ್ನು ಕಲ್ಪಿಸಲು ಹೊರಟರು. ಈ ದಿಸೆಯಲ್ಲಿ ಕಾಯಕ–ದಾಸೋಹ ತತ್ವಗಳನ್ನು ಹುಟ್ಟುಹಾಕಿದರು. ಈ ಮೂಲಕ ವ್ಯಕ್ತಿ ಗೌರವ ಮತ್ತು ವೃತ್ತಿಗೌರವ ಎರಡನ್ನೂ ಏಕಕಾಲಕ್ಕೆ ಸ್ಥಾಪಿಸಿದರು. ವ್ಯಕ್ತಿಯಾದವನು ನಿಷ್ಠೆಯಿಂದ ಯಾವುದೇ ಕಾಯಕ ಮಾಡಿದರೆ ಆ ಕೆಲಸದಲ್ಲಿ ಆತನಿಗೆ ತೃಪ್ತಿ ಇದ್ದೇ ಇರುತ್ತದೆ. ತಾನು ದುಡಿದು ಸಂಪಾದಿಸಿದ ಹಣದಲ್ಲಿ ಕಾಯಕದಿಂದ ಬಂದ ಸಂಪತ್ತಿನಲ್ಲಿ, ಹಂಚಿ ತಿನ್ನುವ ಸಂಸ್ಕೃತಿ ಪ್ರತಿಯೊಬ್ಬ ವ್ಯಕ್ತಿಯದಾಗಬೇಕೆಂದು 'ದಾಸೋಹ' ತತ್ವವನ್ನು ಹೊಸೆದರು.

ಶತಮಾನಗಳಿಂದಲೂ ಅಸ್ಪೃಶ್ಯರನ್ನು ಅತ್ಯಂತ ಕೀಳು ಮಟ್ಟದಲ್ಲಿ ಅಂದರೆ, ಪ್ರಾಣಿಗಳಿಗಿಂತ ಕಡೆಯಾಗಿ ಕಂಡು, ಜನಸಾಮಾನ್ಯರ ಸುಖನೆಮ್ಮದಿಯನ್ನು ಕಡೆಗಣಿಸಿ, ಸ್ತ್ರೀಯರನ್ನು ಭೋಗದ ವಸ್ತುವಾಗಿ ಪರಿಗಣಿಸಿ, ಹೆಣ್ಣು ಮಾಯೆ, ಮೋಕ್ಷಕ್ಕೆ ಅನರ್ಹಳು ಎನ್ನುವ ಕನಿಷ್ಠತೆಯಲ್ಲಿ ಕಾಣುತ್ತಿರುವ ಅಂದಿನ ಸಮಾಜದ ವಿರುದ್ಧ ಬಂಡೆದ್ದ ಶರಣರು ಅವಿರತವಾಗಿ ಹೋರಾಡಿದರು. ಇದರ ಫಲವಾಗಿ ಅವರ ಸಮಾನತೆಯ ಸಮಾಜದಲ್ಲಿ ಪ್ರಜೆ–ಅರಸು, ಹಿರಿದು–ಕಿರಿದು, ಮೇಲು–ಕೀಳು ಸ್ತ್ರೀ–ಪುರುಷ ಭಾವನೆಗಳಿಗೆ ಆಸ್ಪದವೇ ಇರಲಿಲ್ಲ. 'ಎಲ್ಲರೂ ಒಂದೇ' ಎಂಬ ಸಮಾನಭಾವವನ್ನು ಶರಣರು ತಳೆದಿದ್ದರು. ಎಲ್ಲರಲ್ಲಿಯೂ ಆತ್ಮ, ಶಿವ ಇರುವುದರಿಂದ ಶಿವಭಕ್ತಿಯ ಸಮನ್ವಯ ಮಾರ್ಗಕ್ಕೆ ಯಾರು ಬೇಕಾದರೂ ಸೇರಬಹುದೆಂಬ ಮುಕ್ತ ವಾತಾವರಣವನ್ನು ಕಲ್ಪಿಸಿಕೊಟ್ಟರು.

೧೨ನೆಯ ಶತಮಾನದಲ್ಲಿ ವರ್ಗಭೇದಕ್ಕಿಂತಲೂ ವರ್ಣಭೇದ, ವರ್ಣಭೇದಕ್ಕಿಂತಲೂ ಲಿಂಗಭೇದ ಪ್ರಚಲಿತದಲ್ಲಿತ್ತು. ಎಲ್ಲರ ದೇಹಗಳಲ್ಲಿ ದೇವನಿರುವಾಗ ಯಾರ ದೇಹವೂ ಅಪವಿತ್ರವಲ್ಲ. ಹೆಚ್ಚು–ಕಡಿಮೆಯಲ್ಲ. ದೇವರಿಗೆ ಯಾವ ಕುಲ–ಗೋತ್ರಗಳಿಲ್ಲ. 'ದೇವನೊಲಿದ ಕುಲವೇ ಸತ್ಕುಲ'ವೆಂದು ಅರುಹಿದರು. ಬಸವಣ್ಣನವರು ತಮ್ಮ ಹಲವಾರು ವಚನಗಳಲ್ಲಿ ಇದನ್ನು ಸ್ಪಷ್ಟಪಡಿಸಿದ್ದಾರೆ. 'ಕೊಲ್ಲುವವನೇ ಮಾದಿಗ, ಹೊಲಸು ತಿಂಬುವವನೇ ಹೊಲೆಯ ಕುಲವೇನೋ ಆವಂದಿರ ಕುಲವೇನೋ, ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೆಲ್ಲ ಕುಲಜರು' ಹಾಗೆಯೇ 'ಕುಲವೊಂದೇ ತನ್ನ ತಾನರಿದವಂಗೆ, ನಿಲವೊಂದೇ ಕೂಡಲಸಂಗಮದೇವಾ ನಿಮ್ಮನರಿದವಂಗೆ' ಅದೇ ರೀತಿ 'ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ, ವೇದವ ನೋದಿ ಹಾರುವನಾದ' ಇಂಥ ಹಲವಾರು ವಚನಗಳನ್ನು ನೋಡಿದಾಗ ವೃತ್ತಿಯಲ್ಲಿ ಭಿನ್ನತೆ ಇದೆಯೇ ವಿನಃ ವ್ಯಕ್ತಿ ಮಾತ್ರ ಒಬ್ಬನೇ' ಆತ್ಮವೂ ಒಂದೇ. ತನ್ನಲ್ಲಿರುವ ಆತ್ಮನನ್ನು ಅರಿತು ದೇವಮಾರ್ಗದಲ್ಲಿ ನಡೆವಾತನೇ ಕುಲಜನು ಎಂದಿದ್ದಾರೆ. ಅಲ್ಲಮಪ್ರಭುಗಳು ಒಂದು ಕಡೆ ಹೀಗೆ ಹೇಳಿದ್ದಾರೆ– 'ಕಿರಿಯರಾದರೇನು? ಹಿರಿಯರಾದರೇನು? ಅರಿವಿಂಗೆ ಹಿರಿದು, ಕಿರಿದುಂಟೆ? ಎಂದಿದ್ದಾರೆ. ಒಟ್ಟಾರೆ ಬಸವಾದಿ ಶರಣರ ದೃಷ್ಟಿಯಲ್ಲಿ ಸಮಾಜವೆಂದರೆ ಅದೊಂದು ವಿಶಿಷ್ಟ ಜಾತಿ. ಅದು 'ಸುಸಂಸ್ಕೃತ ವ್ಯಕ್ತಿಗಳ ಸಮುದಾಯ ನಿರ್ಮಿಸುವುದೇ ಅವರ ಮುಖ್ಯ ಉದ್ದೇಶವಾಗಿತ್ತು.

* ಚರ್ಚನಕಲ್ಲ ಅಂಚೆ, ಮುದ್ದೇಬಿಹಾಳ ತಾಲ್ಲೂಕು –586 212, ಬಿಜಾಪುರ ಜಿಲ್ಲೆ.

ತೊಡಗಿದ್ದ ಚೌಡಯ್ಯನ ಒಳಗಣ್ಣು ತೆರೆಯುವ ಒಂದು ಪ್ರಸಂಗ ನಡೆಯಿತು. ಒಮ್ಮೆ ಅವನ ದೋಣಿ ಸುಳಿಗೆ ಸಿಕ್ಕಿ ತಿರುಗತೊಡಗಿತು. ಸಾವು-ಬದುಕಿನ ಹೋರಾಟದಲ್ಲಿ ಚೌಡಯ್ಯ ಅವನಿಗರಿವಿಲ್ಲದೆ ಶಿವಶಿವಾ ಎಂದ. ಸುಳಿಯಿಂದ ಪಾರಾದ ದೋಣಿ ಸಮಸ್ಥಿತಿಗೆ ಬಂತು. 'ದೇವರಿಗೆ ಶರಣಾದರೆ ಕ್ಷೇಮವಿದೆ' ಎಂಬ ಅರಿವು ಮೂಡಿತು. ಸುದೈವದಿಂದ ಆತನಿಗೆ ಗುರುಗಳ ಭೇಟಿಯಾಯಿತು. ಜ್ಞಾನೋದಯವುಂಟಾಗಿ ಅವರ ನಿರ್ದೇಶನದಂತೆ ಶರಣರ ಕರ್ಮಭೂಮಿ ಕಲ್ಯಾಣಪಟ್ಟಣದತ್ತ ಬಂದನು. ಹೊಳೆ ದಾಟಿಸುವ ತಾನು ನಂಬಿ ಬಂದವರನ್ನು ಹುಟ್ಟು-ಸಾವಿನಾಚೆ ದಾಟಿಸುವ ರೀತಿಯನ್ನು ಕಲಿಯಬೇಕೆನಿಸಿತು. ಚೌಡಯ್ಯನ ಬದುಕಿನಲ್ಲಿ ಹೊಸತಿರುವು ಉಂಟಾಯಿತು.

### ನೋಟ I

(ದೋಣಿ ಹಾಯಿಸುವ ದೃಶ್ಯ. ದೋಣಿಯಲ್ಲಿ ಕುಳಿತ ಹಳ್ಳಿಗರ ಸಂಭಾಷಣೆ)

ಮುದುಕ : ಏನು ಮನುಷ್ಯಾನೊ ನೀನು. ಸಿಕ್ಕಿದ ಅವಕಾಶಾನಾ ಸರಿಯಾಗಿ ಉಪಯೋಗಿಸಿಕೊಳ್ಳಬೇಕಿತ್ತು. ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಂಡೆ ಮತ್ತೆ ಅಂಥ ಅವಕಾಶ ಸಿಕ್ಕೀತಾ?

ಯುವಕ : ನನಗೆ ಗೊತ್ತಾಗಲಿಲ್ಲ, ಏನು ಮಾಡ್ಲಿ?

ಮುದುಕ: ಗಾಳಿ ಬೀಸಿದಾಗ ತೂರಿಕೊಳ್ಳಬೇಕಪ್ಪಾ. ಎಣ್ಣೆ ಬಂದಾಗ ಕಣ್ಣು ಮುಚ್ಚಿ ಕೊಂಡರೆ ಆಗುತ್ತ್ಯೆ?

ಚೌಡಯ್ಯ: ನಿಜ, ನೀವು ಹೇಳುವುದು ಸರಿಯಾಗಿದೆ.

*ಗಾಳಿ ಬಿಟ್ಟಲ್ಲಿ ತೂರಿಕೊಳ್ಳಿರಯ್ಯ*
*ಗಾಳಿ ನಿನ್ನಾಧೀನವಲ್ಲ ಕಂಡಯ್ಯ*
*ನಾಳೆ ತೂರಿಹೆನೆಂದರಿಲ್ಲ, ಕಂಡಯ್ಯ*
*ಶಿವಶರಣರೆಂಬುದೊಂದು ಗಾಳಿ ಬಿಟ್ಟಲ್ಲಿ*
*ಬೇಗ ತೂರೆಂದನಂಬಿಗರ ಚೌಡಯ್ಯ.*

ಹಿರಿಯ ವ್ಯಕ್ತಿ: ಮುತ್ತಿನಂಥ ಮಾತು ಚೌಡಯ್ಯನವರೆ. ಹೊರಗೆ ಸುಳಿವ ಗಾಳಿ ಕುರಿತು ಹೇಳುವ ನೆವದಲ್ಲಿ ಒಳಗೆ ಸುಳಿವ ಪ್ರಾಣವಾಯುವಿನ ಬಗ್ಗೆ ಹೇಳಿದೆಯಲ್ಲ ನನ್ನಪ್ಪಾ! ಒಳಗಿನ ಗಾಳಿ ಸುಳಿವಾಗಲೇ ಹುಟ್ಟಿನ ಹೊಟ್ಟು ತೂರಿ ಮುಕ್ತಿಯೆಂಬ ಗಟ್ಟಿ ಕಾಳನ್ನು ರಾಶಿ ಮಾಡ ಬೇಕಲ್ಲವೆ? ಈ ಉಸಿರು ನಮ್ಮ ಅಧೀನವಲ್ಲ. ಯಾವ ಕ್ಷಣಕ್ಕೆ ಇಲ್ಲವಾಗುವುದೋ ಅದು ಇರುವ ತನಕವೇ. ಈ ದೇಹದಾಟ. ದುಡಿಸಿಕೊ! ಎಂಥ ಎಚ್ಚರಿಕೆಯ ಮಾತು ನಿಮ್ಮವು ಚೌಡಯ್ಯ!

### ನೋಟ II

ಪೂಜಾರಿ : ದೇವರಪೂಜೆಗೆ ಹೊತ್ತಾಯಿತು. ಭಕ್ತರು ಕಾಯುತ್ತಿರುತ್ತಾರೆ. ನಡೆಯಿರಿ.

ಒಬ್ಬ ನಾಗರಿಕ : ಏನು ಶಾಸ್ತ್ರಿಗಳೆ ಹೂಪತ್ರೆ ದಂಡಿಯಾಗಿ ತಂದಿದ್ದೀರಿ. ಯಾರ ಹಿತ್ತಲಲ್ಲಿ ಕಿತ್ತಿರಿ.

ಪೂಜಾರಿ: ಎಲ್ಲಿ ಸಿಕ್ಕುತ್ತವೆ ಅಲ್ಲಿ. ಹೂ ಪತ್ರೆ ದಂಡಿಯಾಗಿಲ್ಲ ದಿದ್ದರೆ ಅದೆಂಥ ಪೂಜೆ!

ಚೌಡಯ್ಯ : ಸ್ವಾಮಿ, ಹೂ ಪತ್ರೆಯಿದ್ದರೆ ಸಾಕೆ ಪೂಜೆಗೆ?

*ಉದಯದಲೆದ್ದು ಪತ್ರೆ ಪುಷ್ಪಗಳಿಗೆ ಹೋಗುವ ಅಣ್ಣಗಳು*
*ನೀವು ಕೇಳಿರೊ*
*ನೀವು ಗೀಡದ ವೈರಿಗಳೊ ಗಿಡದ ದಾಯಾದ್ಯರೊ*
*ಹರಿಯ ತೊಪ್ಪಲನೆ ತಂದು ಆ ದೇವರಮಸ್ತಕದ*
*ಮೇಲೊಟ್ಟುವ ಬದಲು ಆ ತೊಪ್ಪಲನೆ ತಂದು*
*ಬಿಸಿಮಾಡಿ ಪಶುಪತಿಯ ಜಂಗಮಕ್ಕೆ ನೀಡಿದೊಡೆ*
*ಆ ಜಂಗಮದ ಬಸಿರು ತುಂಬಿದೊಡೆ*
*ಲಿಂಗದ ಹಸಿವಡಗಿತ್ತೆಂದಾತ ನಮ್ಮ ಅಂಬಿಗರ ಚೌಡಯ್ಯ*

ಭಕ್ತ: ಹೌದು. ಈ ವಿಚಾರ ಅರಿವಿನ ಮನೆಯಲ್ಲಿ ಪ್ರಸ್ತಾಪ ವಾದಾಗ ಜಂಗಮಕ್ಕೆ ಎರೆದರೆ ಲಿಂಗ ನೆನೆಯಿತ್ತು, ಅಂದರೆ ಜೀವಿಗಳಿಗೆ ನೀಡಿದರೆ ಭಗವಂತ ತೃಪ್ತಿಗೊಳ್ಳುತ್ತಾನೆ ಎಂದು ಹೇಳಿದ್ದು ನನಗೆ ಚೆನ್ನಾಗಿ ನೆನಪಿದೆ. ಚೌಡಯ್ಯ ಶರಣರು ಅದನ್ನೇ ಹೇಳಿದರಲ್ಲವೆ?

### ನೋಟ III

ಅನುಭಾವಿ : ಶರಣರೆ, ನಿನ್ನೆ ನಾವು ನಡೆಸಿದ ಚರ್ಚೆಯನ್ನೆ ಮುಂದುವರಿಸೋಣ. ಏಕೆಂದರೆ ವಿಷಯ ಬಹಳ ಪ್ರಸ್ತುತ. ಆಸೆ ಮನುಷ್ಯನನ್ನು ಹೇಗೆ ಕಾಡುತ್ತದೆ; ಅವನು ಹೇಗೆ ಸಾಲಾಗಿ ಚಿಂತೆಗಳ ಜಾಲದಲ್ಲಿ ಸಿಕ್ಕಿ ಬೀಳುತ್ತಾನೆ; ಇದರಿಂದ ಪಾರಾಗುವುದು ಹೇಗೆ ಎಂಬ ಬಗ್ಗೆ ಆಲೋಚಿಸೋಣ. ಈ ದಿನ ಅಂಬಿಗರ ಚೌಡಯ್ಯನವರು ಬಂದಿದ್ದಾರೆ. ಅವರ ಅನುಭವವೇನು ? ಕೇಳೋಣ.

ಚೌಡಯ್ಯ: ಶರಣರೆ, ಮನುಷ್ಯನ ಮನಸ್ಸು ಚಿಂತೆಗಳ ಸಂತೆ. ಒಂದನ್ನು ಬಗೆಹರಿಸುವವರಲ್ಲಿ ಇನ್ನೊಂದು! ಇನ್ನು ಶಿವಚಿಂತನೆಗೆ ಎಡೆ ಎಲ್ಲಿ?

*ಬಡತನಕ್ಕೆ ಉಂಬುವ ಚಿಂತೆ, ಉಣಲಾದರೆ ಉಡುವ ಚಿಂತೆ,*
*ಉಡಲಾದರೆ ಇಡುವ ಚಿಂತೆ, ಇಡಲಾದರೆ ಹೆಂಡಿರ ಚಿಂತೆ,*
*ಹೆಂಡಿರಾದರೆ ಮಕ್ಕಳ ಚಿಂತೆ, ಮಕ್ಕಳಾದರೆ ಬದುಕಿನ ಚಿಂತೆ,*
*ಬದುಕಾದರೆ ಕೇಡಿನ ಚಿಂತೆ, ಕೇಡಾದರೆ ಮರಣದ ಚಿಂತೆ,*
*ಇಂತೀ ಹಲವು ಚಿಂತೆಯಲ್ಲಿದ್ದವರ ಕಂಡೆನು*
*ಶಿವಚಿಂತೆಯಲ್ಲಿದ್ದವರೊಬ್ಬರನೂ ಕಾಣೆನೆಂದಾತ*
*ನಮ್ಮ ಅಂಬಿಗರ ಚೌಡಯ್ಯ.*

ಅನುಭಾವಿ : ನಿಜ ಚೌಡಯ್ಯನವರೆ, ನಿಮ್ಮ ಮಾತು ಸತ್ಯ. ಈ ಎಲ್ಲಾ ಚಿಂತೆಗಳ ಮರೆತು ಶಿವಚಿಂತೆಯಲ್ಲಿ ತೊಡಗಿದರೆ ಎಲ್ಲವೂ ಸುಸೂತ್ರ.

### ನೋಟ IV

ನಿರೂಪಕ : ಅಂಬಿಗರ ಚೌಡಯ್ಯನದು ವಿಶಿಷ್ಟ ವ್ಯಕ್ತಿತ್ವ. ಆತನು ದೊಡ್ಡವರು ಹೇಳಿದ್ದೆಂದು ಸುಮ್ಮನೆ ಒಪ್ಪಿ ಬಿಡುತ್ತಿರಲಿಲ್ಲ. ಸ್ವತಂತ್ರವಾಗಿ ಆಲೋಚನೆ ಮಾಡಿ ಅನುಭವಕ್ಕೆ ತಂದುಕೊಂಡು ಸರಿಯೆಂದು ಒಪ್ಪುತ್ತಿದ್ದನು. 'ಅವನು ನಿಜದ ನಗಾರಿ, ಅವನ ಮಾತು ನಿರ್ಭಯತೆಯ ಭೇರಿ, ಎಂಬ ಮಾತು ನಿಜ. ಆತನ ಮಾತು ಖಡಾಖಂಡಿತ. ಚಾಟಿಯೇಟಿನಷ್ಟು ತೀವ್ರ. ಆದರೆ ಆ ಒರಟುತನದ ಹಿಂದಿರುವ ಆತನ ಸಾಮಾಜಿಕ ಕಾಳಜಿ ಮಾನವೀಯ ಅಂತಃಕರಣ ದೊಡ್ಡವು.

ಅಂಬಿಗರ ಚೌಡಯ್ಯ ಒಳ್ಳೆಯ ವಚನಕಾರ. ಆತ ತನ್ನ ವಚನಗಳಿಗೆ ಗುರು, ದೈವಗಳ ಹೆಸರನ್ನು ಅಂಕಿತವಾಗಿ ಟ್ಟುಕೊಳ್ಳದೇ ತನ್ನ ಹೆಸರನ್ನೇ ಬಳಸಿ ದಿಟ್ಟತನ ತೋರಿದ್ದಾನೆ. ಆತನ ೨೮೦ಕ್ಕೂ ಹೆಚ್ಚಿನ ವಚನಗಳು ಸಿಕ್ಕಿವೆ. ಅವನ ವಚನಗಳಲ್ಲಿ ವೈಯಕ್ತಿಕ ಚಿಂತನೆ, ವ್ಯಕ್ತಿನಿಷ್ಠ ಪ್ರತಿಕ್ರಿಯೆಗಳಿವೆ. ಅಂತೆಯೇ ಅವಕ್ಕೆ ನೆಲೆ-ಬೆಲೆಗಳಿವೆ.

ಧ್ವನಿ: ದೊಡ್ಡವರು ಹೇಳಿದ್ದಾರೆಂದು ಚೌಡಯ್ಯ ಎಲ್ಲವನ್ನೂ ಒಪ್ಪುವುದಿಲ್ಲ. ಸ್ವತಂತ್ರವಾಗಿ ಆಲೋಚಿಸಿ ಸತ್ಯಾಸತ್ಯತೆಯನ್ನು ತುಲನೆ ಮಾಡಿ ನಿದರ್ಶನಕ್ಕೆ ತಂದು ಒಪ್ಪುವ ಜಾಯಮಾನ ಆತನದು. 'ಶರಣಸತಿ ಲಿಂಗಪತಿ' ತತ್ವವು ಬಹುಮಟ್ಟಿಗೆ ಎಲ್ಲರೂ ಒಪ್ಪಿರುವಂಥದ್ದು. ಆದರೆ ಚೌಡಯ್ಯ ಅದನ್ನು ತನ್ನ ವಿಚಾರದ ನಿಕರ್ಷಕ್ಕೆ ಈಡುಮಾಡುತ್ತಾನೆ. ಆ ಕುರಿತ ಅವನ ವಚನ ಹೀಗಿದೆ;

*ಶರಣ ಸತಿ ಲಿಂಗಪತಿ ಎಂಬರು*
*ಶರಣ ಹೆಣ್ಣಾದ ಪರಿಯೆಂತು?*
*ಲಿಂಗ ಗಂಡಾದ ಪರಿ ಇನ್ನೆಂತು ?*
*ನೀರು ನೀರ ಕೂಡಿ ಬೆರೆವಲ್ಲ, ಭೇದಿಸಿ ಬೇರೆ*
*ಮಾಡಬಹುದೆ?*
*ಗಂಡು-ಹೆಣ್ಣು ಯೋಗವಾದಲ್ಲಿ*
*ಆತುರ ಹಿಂಗೆ ಘಟ ಬೇರಾಯಿತ್ತು*
*ಶರಣಸತಿ ಲಿಂಗಪತಿ ಎಂಬ ಮಾತು*
*ಮೊದಲಿಗೆ ಮೋಸ ಲಾಭಕ್ಕಧೀನವುಂಟೆ*
*ಎಂದನಂಬಿಗರ ಚೌಡಯ್ಯ.*

ಸತಿ-ಪತಿ ಭಾವವನ್ನು ಜೀವ-ದೇಹ-ಭಾವದೊಡನೆ ತುಲನೆ ಮಾಡುವ ಕ್ರಮವೇ ಚೌಡಯ್ಯನಿಗೆ ಸರಿಕಾಣದು. ಸತಿ-ಪತಿ ಸಂಯೋಗವಾಗಿ ಆತುರ ಹಿಂಗಿದಾಗ ಅವರ ದೇಹಗಳು ಬೇರೆಯಾಗುತ್ತವೆ. ಆದ್ದರಿಂದ ನೀರು-ನೀರನ್ನು ಬೆರೆತಂತೆ ಎಂಬ ಹೋಲಿಕೆ ಯೋಗ್ಯವೆನಿಸುತ್ತದೆ ಚೌಡಯ್ಯನಿಗೆ. ಮೂಲಸಿದ್ಧಾಂತವನ್ನು ತರ್ಕಕ್ಕೊಳಪಡಿಸಿ, ಅನುಭವದ ನಿಕಷಕ್ಕಿಟ್ಟು ತಿದ್ದಿ ತೀಡಿ ಅದರ ಮೌಲ್ಯವನ್ನು ಗಟ್ಟಿಗೊಳಿಸುವ ವಿನೂತನ ವಿಧಾನ ಅಂಬಿಗರ ಚೌಡಯ್ಯನದು.

ಧ್ವನಿ I : ಹೀಗೆ ಶರಣ ಅಂಬಿಗರ ಚೌಡಯ್ಯನದು ೧೨ನೆಯ ಶತಮಾನದ ಕಲ್ಯಾಣದ ಶರಣರಲ್ಲಿ ಎದ್ದು ಕಾಣುವ ವ್ಯಕ್ತಿತ್ವ. ವಿಚಾರವಂತ ಭಕ್ತನಾಗಿ, ನಿಜ ಅನುಭವಿಯಾಗಿ, ಉತ್ತಮ ವಚನಕಾರನಾಗಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿದ್ದಾನೆ. ಆತ ತನ್ನ ವೃತ್ತಿ ಸಹಜವಾದ ಒರಟು ಭಾಷೆಯಲ್ಲಿ ಕಟು ವಾದರೂ ದಿಟವನ್ನೇ ನುಡಿವ ಧೀಮಂತಿಕೆ ತೋರಿಸಿದ್ದಾನೆ. ಆತನ ಸೂಳ್ನುಡಿಗಳು ನಮ್ಮೆದುರು ಇವೆ. ಅವನ್ನು ಓದಿ ಅರ್ಥಮಾಡಿಕೊಂಡು ಬದುಕಿನಲ್ಲಿ ಅಳವಡಿಸಿಕೊಂಡರೆ ಆ ಶರಣಶ್ರೇಷ್ಠನ ಜಯಂತಿಯನ್ನು ಆಚರಿಸಿದ ಕೃತಾರ್ಥತೆ ನಮಗೆ ಒದಗುತ್ತದೆ.

❖

ಯಾವುದರ ಅಥವಾ ಯಾರ ಸಹವಾಸದಿಂದ ಒಳ್ಳೆಯ ಪರಿಣಾಮವಾಗುವುದೋ ಅದು ಸತ್ಸಹವಾಸವೆನಿಸಿಕೊಳ್ಳುತ್ತದೆ.

'ಸಾರ ಸಜ್ಜನರ ಸಂಗವದು ಲೇಸಯ್ಯ' ಎಂದಿದ್ದಾರೆ ಶರಣರು. ಸಜ್ಜನರ ಸಹವಾಸದಿಂದ ನಮ್ಮಲ್ಲಿ ಸದ್ಗುಣ, ಸಚ್ಚಾರಿತ್ರ್ಯ, ಸನ್ನಡತೆಗಳು ಅಳವಡುತ್ತವೆ. ಅದೇ ದುಷ್ಟ ಶಕ್ತಿಗಳೊಡನೆ ಸಂಪರ್ಕವಿಟ್ಟುಕೊಂಡರೆ ಅದು ನಮ್ಮನ್ನು ದುರ್ನಡತೆ ಮತ್ತು ನರಳಾಟಗಳ ಏಣಿ ಹತ್ತಿಸುತ್ತದೆ. ಆದ್ದರಿಂದ ಸಹವಾಸದ ಆಯ್ಕೆ ಅತ್ಯಂತ ಮುಖ್ಯವಾದುದು.

ಸತ್ಸಹವಾಸವು ನಾವು ಸಹಜವಾಗಿ ಮತ್ತು ಸಕ್ರಮವಾಗಿ ಬದುಕಲು ಮತ್ತು ನಿತ್ಯದ ಸಮಸ್ಯೆಗಳನ್ನು ಯುಕ್ತಾಯುಕ್ತವಾಗಿ ಬಗೆಹರಿಸಿಕೊಳ್ಳಲು ಅಗತ್ಯ ತರಬೇತಿ ನೀಡುತ್ತದೆ. ಸತ್ಸಂಗದಿಂದ ಸಣ್ಣತನ, ಪೂರ್ವಾಗ್ರಹ ಮತ್ತು ಪಕ್ಷಪಾತ ದೃಷ್ಟಿಗಳೆಲ್ಲ ನಮ್ಮಿಂದ ದೂರವಾಗುತ್ತವೆ. ಸತ್ಸಂಗಕ್ಕೆ ನಾವು ಅಂಟಿಕೊಳ್ಳದಿದ್ದರೆ ಉತ್ಥಾನಕ್ಕೆ ನಾವು ಪಡುವ ಪ್ರಾಮಾಣಿಕ ಹಂಬಲವು ವ್ಯರ್ಥವಾಗುತ್ತದೆ. ಒಳಿತು ಕೆಡಕುಗಳ ವ್ಯತ್ಯಾಸವೇ ನಮಗೆ ತಿಳಿಯುವುದಿಲ್ಲ. ವಾಸ್ತವವಾಗಿ ಹೇಳುವುದಾದರೆ, ನಮ್ಮ ವಕ್ರ ಐಹಿಕ ಪ್ರಲೋಭನೆಗಳನ್ನು ಪರಿವರ್ತಿಸಿ ನಮ್ಮನ್ನು ಸಜ್ಜನಿಕೆ, ಸಭ್ಯತೆ ಮತ್ತು ಸಹಜತೆಗಳ ಕಡೆ ತಿರುಗಿಸುವ ಶಿಕ್ಷಣ ದೊರೆಯುವುದು ಸತ್ಸಂಗದಿಂದ ಮಾತ್ರ. ಒಳ್ಳೆಯ ಸಹವಾಸದಿಂದ ವ್ಯಕ್ತಿಯ ಸ್ಥಾನಮಾನಗಳು ಉನ್ನತ ಗೊಳ್ಳುತ್ತವೆ. ಬಹುಮಟ್ಟಿಗೆ ನಮ್ಮ ವ್ಯಕ್ತಿತ್ವಕ್ಕೆ ನಮ್ಮ ಸಹವಾಸವೇ ಅಳತೆಗೋಲಾಗುತ್ತದೆ.

ಸತ್ಸಹವಾಸದಿಂದ ಸತ್ಪರಿಣಾಮ. ಅದರಿಂದ ವ್ಯಕ್ತಿಯ ಅಂತರಂಗ ಬಹಿರಂಗಗಳೆರಡಕ್ಕೂ ಸಂಸ್ಕಾರ ದೊರೆಯುತ್ತದೆ ಅವನು ಒಳಹೊರಗೆ ಪರಿಶುದ್ಧನಾಗುತ್ತಾನೆ. ಪರಿಸರಕ್ಕೆ ಬೇಕಾದ ಬದುಕು ಅವನದಾಗುತ್ತದೆ. 'ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ' ಎಂದು ಸರ್ವಜ್ಞ ಹೇಳಿರುವುದು ಅದಕ್ಕೇ. ❖

## ನಡು-ಹಾದಿ

ಸಂಕಷ್ಟಪಡುವುದಾಗಲಿ ಸೊರಗುವುದಾಗಲಿ ತಪಸ್ಸಾಧನೆಯೆನಿಸಲಾರದು. ಸಾಧಕನ ಸೊರಗಿದ ದೇಹದಂತೆ ಆತನ ಮನಸ್ಸೂ ಸೊರಗಿರುತ್ತದೆ. ರೋಗಗ್ರಸ್ತವಾದ ಮನಸ್ಸು ಯಾವುದನ್ನೂ ಗ್ರಹಣ ಮಾಡಿಕೊಳ್ಳಲಾರದು. ಕಾಯಕಷ್ಟದಿಂದ ಲೌಕಿಕ ಜ್ಞಾನವೂ ಲಭಿಸುವುದಿಲ್ಲ. ದುರ್ಬಲ ಪ್ರಕೃತಿಯಿಂದ ಇಂದ್ರಿಯ ಜಯ ಸಾಧ್ಯವೇ?

ಹಣತೆಯಲ್ಲಿ ಎಣ್ಣೆಗೆ ಬದಲಾಗಿ ನೀರನ್ನು ಸುರಿಯತಕ್ಕವನು ಕತ್ತಲೆಯನ್ನು ಹಿಮ್ಮೆಟ್ಟಿಸಲಾರ. ಕೊಳೆತ ಕಟ್ಟಿಗೆಯಿಂದ ಬೆಂಕಿಯನ್ನು ಹೊತ್ತಿಸಬೇಕೆನ್ನುವವನು ತನ್ನ ಸಾಹಸದಲ್ಲಿ ಸೋಲುವುದು ನಿಶ್ಚಿತ. ಐಹಿಕ ಸುಖಭೋಗಗಳ ಮೋಹವನ್ನು ತೊರೆಯದ, ಕಾಮಪಿಪಾಸೆಯನ್ನು ಹರಿದೊಗೆಯದೆ ಆತ್ಮವನ್ನು ಜಯಿಸುತ್ತೇ ನೆನ್ನುವ ಮಾತಿಗೆ ಯಾವ ಅರ್ಥವಿದೆ? ಅನಾಚಾರದ ಬದುಕನ್ನು ಸಾಗಿಸುತ್ತ ಮನಸ್ಸನ್ನು ಅಂಕಿತದಲ್ಲಿ ಇಟ್ಟುಕೊಂಡವರು ಜಗತ್ತಿನಲ್ಲಿ ಯಾರಾದರೂ ಇದ್ದಾರೆಯೇ?

ಸ್ವಂತದ ಪ್ರಶ್ನೆಯನ್ನು ಯಾವನು ಬಿಟ್ಟಿರುವನೋ ಅವನ ಬಳಿಯಲ್ಲಿ ಮೋಹಗಳೊಂದೂ ಸುಳಿಯಲಾರವು. ಅವನು ಈ ಲೋಕದ ಇಲ್ಲವೆ ಪರಲೋಕದ ಯಾವ ಸುಖವನ್ನು ಬಯಸುವುದಿಲ್ಲ. ಅವನು ಈ ಲೋಕದ ಇಲ್ಲವೆ ಪರಲೋಕದ ಯಾವ ಸುಖವನ್ನೂ ಬಯಸುವುದಿಲ್ಲ. ಬದುಕಿನ ಸ್ವಾಭಾವಿಕ ಅವಶ್ಯಕತೆಗಳು ಆತನನ್ನು ಅಡ್ಡಹಾದಿಗೆ ಕರೆದೊಯ್ಯಲಾರವು.

ಇಂದ್ರಿಯ ವ್ಯಾಮೋಹದಲ್ಲಿ ವಿನಾಶವಿದೆ. ಅದಕ್ಕೆ ಆಳಾದವನು ಅವನತಿ ಹೊಂದುತ್ತಾನೆ. ಬದುಕಿನ 'ಬೇಕು'ಗಳನ್ನು ಪೂರೈಕೆ ಮಾಡಿಕೊಳ್ಳುವುದು ಮಾತ್ರ ಪಾಪಾಚರಣೆಯಲ್ಲ. ದೇಹವನ್ನು ಆರೋಗ್ಯವಾಗಿ ಕಾಪಾಡಿಕೊಂಡು ಬರುವುದು ಮನುಷ್ಯ ಪಾಲಿನ ಕರ್ತವ್ಯವಾಗಿದೆ. ಸರಿಯಾದ ದೇಹ ಬಲ ಇಲ್ಲದೇ ಹೋದರೆ ಮನಸ್ಸನ್ನು ಬಲವಾಗಿಯೂ ನಿರ್ಮಲವಾಗಿಯೂ ಇಟ್ಟು ಜ್ಞಾನದೀಪವನ್ನು ಹೊತ್ತಿಸುವುದು ನಮಗೆ ಸಾಧ್ಯವಾಗ ಲಾರದು. ಕಮಲಪುಷ್ಪದ ಸುತ್ತಲೂ ನೀರು ಪಸರಿಸಿರುತ್ತದೆ. ಆದರೂ ಅದು ಹೂವಿನ ಯಾವ ಎಸಳನ್ನೂ ಒದ್ದೆಗೊಳಿಸುವುದಿಲ್ಲ.

-ಬುದ್ಧ





# ಕ್ರಾಂತಿಕಾರಿ ಶರಣ ಅಂಬಿಗರ ಚೌಡಯ್ಯ

-ಟಿ.ಆರ್. ಮಹಾದೇವಯ್ಯ *



ನಿರೂಪಕ : ಅಂಬಿಗರ ಚೌಡಯ್ಯ ಬಸವಣ್ಣನವರ ಸಮಕಾಲೀನ ಶರಣ. ೧೨ನೇ ಶತಮಾನದ ಕರ್ನಾಟಕದ ಬಾನಂಗಣದಲ್ಲಿ ಮಿನುಗಿದ ಸಹಸ್ರ ಸಂಖ್ಯೆಯ ಶರಣ ಸಮುದಾಯದಲ್ಲಿ ಪ್ರಜ್ವಲಿಸಿದ ಬೆಳ್ಳಿ ನಕ್ಷತ್ರ. ಕಲ್ಯಾಣದಲ್ಲಿ ಸಮಾವೇಶಗೊಂಡಿದ್ದ ಶರಣ ಸಮುದಾಯ ಬಸವಣ್ಣನವರ ನೇತೃತ್ವದಲ್ಲಿ ನವಸಮಾಜ ಕಟ್ಟ ಬಯಸಿದರು. ವರ್ಣ, ವರ್ಗ, ಶೋಷಣೆ ರಹಿತವಾದ ಮಾನವೀಯ ಮೌಲ್ಯವುಳ್ಳ ಸಮಾಜ ಅದಾಗಿತ್ತು. ಸಕಲ ಜೀವಾವಳಿಗೆ ಲೇಸ ಬಯಸುವ ಶರಣರ ಉದಾರ ನಿಲುವು ಬಹು ಜನರನ್ನು ಆಕರ್ಷಿಸಿತು. ನಾಡಿನ ನಾನಾ ಕಡೆಯಿಂದ, ಹೊರಗಿನ ಕಾಶ್ಮೀರ, ಒರಿಸ್ಸಾ, ಮಹಾರಾಷ್ಟ್ರ, ಆಫ್ಘಾನಿಸ್ಥಾನಗಳಿಂದ ಜನರು ತಂಡೋಪತಂಡವಾಗಿ ಬಂದರು. ಬಸವಣ್ಣ ಅಪೂರ್ವವಾದ ವ್ಯಕ್ತಿತ್ವ ಅವರ ಅದ್ಭುತ ಸಂಘಟನಾಶಕ್ತಿ ಎಲ್ಲರನ್ನು 'ಇವನಮ್ಮವ, ಇವನಮ್ಮವ' ಎಂಬ ಆತ್ಮೀಯಭಾವ ಬಂಧಿಸಿತು.

**ಧ್ವನಿ I:** ವರ್ಣಾಶ್ರಮ ಧರ್ಮದ ವ್ಯವಸ್ಥೆ ಜನರಲ್ಲಿ ತರ-ತಮ ಭೇದ ನಿರ್ಮಿಸಿತ್ತು. ಮೇಲು ವರ್ಗದವರು ಎಲ್ಲಾ ಸೌಲಭ್ಯಗಳನ್ನು ಪಡೆದು, ಕೆಳವರ್ಗದವರಿಗೆ ಅದು ದಕ್ಕದಂತೆ ಮಾಡಿ ಅವರನ್ನು ಶೋಷಣೆ ಮಾಡುತ್ತಿದ್ದ ರೀತಿ ಅಮಾನುಷವಾಗಿತ್ತು. ಅಸ್ಪೃಶ್ಯರ ಪಾಡಂತೂ ಘೋರವಾಗಿತ್ತು. ಹೆಣ್ಣುಮಕ್ಕಳ ಪಾಡೂ ಇದಕ್ಕಿಂತ ಭಿನ್ನವಾಗಿರಲಿಲ್ಲ. ಕೀಳರಿಮೆಯಿಂದ ಮೂಲೆಗುಂಪಾಗಿದ್ದ ಇಂಥವರಿಗೆ ಅವಕಾಶ ನೀಡಿ ಅವರೆಲ್ಲಾ ಆತ್ಮಗೌರವದಿಂದ ಬಾಳುವ ಅವಕಾಶ ನೀಡಿದರು ಶರಣರು.

**ಧ್ವನಿ II:** ಜೀವನೋಪಾಯಕ್ಕಾಗಿ ಕೈಕೊಂಡ ವೃತ್ತಿಗಳೇ ಸಮಾಜದಲ್ಲಿ ಜಾತಿಗಳು ಹುಟ್ಟಲು ಕಾರಣವಾದವು. ಕೈಕೊಂಡ ಕಸುಬುಗಳಲ್ಲಿ ಉತ್ತಮ, ಅಧಮ ಭಾವನೆ ಬೆಳೆಸಿದ್ದರಿಂದ ತಾರತಮ್ಯ ನೀತಿ ಬೆಳೆಯಿತು. ಇದನ್ನು ಹೋಗಲಾಡಿಸಲು ಶರಣರು ವೃತ್ತಿಗಳಲ್ಲಿರುವ ಮೇಲು-ಕೀಳು ಎಂಬ ಭಾವನೆಯನ್ನೇ ಬೇರು ಸಹಿತ ಕಿತ್ತರು. ಸತ್ಯ ಶುದ್ಧ ವೃತ್ತಿಯನ್ನು ಕಾಯಕವೆಂದು ಕರೆದರು. ಎಲ್ಲರೂ ದುಡಿದೇ ತಿನ್ನಬೇಕು. ದುಡಿಮೆ ಪ್ರಾಮಾಣಿಕವಾಗಿರಬೇಕು. 'ಕಾಯಕವೇ ಕೈಲಾಸ' ಎಂಬುದು ಶರಣರ ಘೋಷಣಾ ವಾಕ್ಯ! ಅಷ್ಟೇ ಅಲ್ಲ. ದುಡಿಮೆಯ ಫಲವನ್ನು ಹಂಚಿ ಉಣ್ಣುವ ದಾಸೋಹ ತತ್ವದಿಂದಾಗಿ ಸಮಾಜದಲ್ಲಿ ಆರ್ಥಿಕ ಸಮತೋಲನ ಸಾಧ್ಯವಾಯಿತು. ಕೀಳೆಂದು ಕಡೆಗಣಿಸಿದ್ದ ಉಪಯುಕ್ತ ಕಸುಬುಗಳೆಲ್ಲಾ ಅಭಿವೃದ್ಧಿ ಹೊಂದಿ ಸರ್ವಾಂಗೀಣ ಸಮಾಜ ರಚನೆಗೆ ನಾಂದಿಯಾಯಿತು.

**ಧ್ವನಿ I:** ಕೀಳೆಂದು ಕಡೆಗಣಿಸಲ್ಪಟ್ಟ, ಅವಕಾಶ ವಂಚಿತರಾಗಿ ಮೂಲೆ ಸೇರಬೇಕಾದ ಅನೇಕ ಚೇತನಗಳು ಶರಣರ ಕರುಣೆಯಿಂದ ಬಾಳಿಗೆ ಬೆಳಕ ಕಂಡವು. ಅಂಥಹವರಲ್ಲಿ ತನ್ನ ವಿಶಿಷ್ಟ ಜಾಯಮಾನದಿಂದ ನಮ್ಮ ಗಮನ ಸೆಳೆಯುವ ವ್ಯಕ್ತಿ ಅಂಬಿಗರ ಚೌಡಯ್ಯ. ಆತ ವೃತ್ತಿಯಲ್ಲಿ ಅಂಬಿಗ; ದೋಣಿ ನಡೆಸುವವನು. ಪ್ರವೃತ್ತಿಯಲ್ಲಿ ವಿಚಿಕಿತ್ಸಕ ದೃಷ್ಟಿಯ ವಿಚಾರವಂತ; ಬಿಚ್ಚುಮನಸ್ಸಿನ ಕ್ರಾಂತಿ ಪುರುಷ.

**ನಿರೂಪಕ :** ಈ ದಡದಿಂದ ಆಚೆ ದಡಕ್ಕೆ ತನ್ನ ದೋಣಿಯಿಂದ ಜನರನ್ನು ಕರೆದೊಯ್ಯುವ ಯಾಂತ್ರಿಕ ಬದುಕಿನಲ್ಲಿ

* ನಂ.136, 1ನೇ ಮುಖ್ಯ ರಸ್ತೆ, 1ನೇ ವಿಭಾಗ, ನಾಗರಬಾವಿ 3ನೇ ಹಂತ, ಬೆಂಗಳೂರು - 560 072.

ಯಾವುದರ ಅಥವಾ ಯಾರ ಸಹವಾಸದಿಂದ ಒಳ್ಳೆಯ ಪರಿಣಾಮವಾಗುವುದೋ ಅದು ಸತ್ಸಹವಾಸವೆನಿಸಿಕೊಳ್ಳುತ್ತದೆ.

'ಸಾರ ಸಜ್ಜನರ ಸಂಗವದು ಲೇಸಯ್ಯ' ಎಂದಿದ್ದಾರೆ ಶರಣರು. ಸಜ್ಜನರ ಸಹವಾಸದಿಂದ ನಮ್ಮಲ್ಲಿ ಸದ್ಗುಣ, ಸಚ್ಚಾರಿತ್ರ್ಯ, ಸನ್ನಡತೆಗಳು ಅಳವಡುತ್ತವೆ. ಅದೇ ದುಷ್ಟ ಶಕ್ತಿಗಳೊಡನೆ ಸಂಪರ್ಕವಿಟ್ಟುಕೊಂಡರೆ ಅದು ನಮ್ಮನ್ನು ದುರ್ನಡತೆ ಮತ್ತು ನರಳಾಟಗಳ ಏಣಿ ಹತ್ತಿಸುತ್ತದೆ. ಆದ್ದರಿಂದ ಸಹವಾಸದ ಆಯ್ಕೆ ಅತ್ಯಂತ ಮುಖ್ಯವಾದುದು.

ಸತ್ಸಹವಾಸವು ನಾವು ಸಹಜವಾಗಿ ಮತ್ತು ಸಕ್ರಮವಾಗಿ ಬದುಕಲು ಮತ್ತು ನಿತ್ಯದ ಸಮಸ್ಯೆಗಳನ್ನು ಯುಕ್ತಾಯುಕ್ತವಾಗಿ ಬಗೆಹರಿಸಿಕೊಳ್ಳಲು ಅಗತ್ಯ ತರಬೇತಿ ನೀಡುತ್ತದೆ. ಸತ್ಸಂಗದಿಂದ ಸಣ್ಣತನ, ಪೂರ್ವಾಗ್ರಹ ಮತ್ತು ಪಕ್ಷಪಾತ ದೃಷ್ಟಿಗಳೆಲ್ಲ ನಮ್ಮಿಂದ ದೂರವಾಗುತ್ತವೆ. ಸತ್ಸಂಗಕ್ಕೆ ನಾವು ಅಂಟಿಕೊಳ್ಳದಿದ್ದರೆ ಉತ್ಥಾನಕ್ಕೆ ನಾವು ಪಡುವ ಪ್ರಾಮಾಣಿಕ ಹಂಬಲವು ವ್ಯರ್ಥವಾಗುತ್ತದೆ. ಒಳಿತು ಕೆಡಕುಗಳ ವ್ಯತ್ಯಾಸವೇ ನಮಗೆ ತಿಳಿಯುವುದಿಲ್ಲ. ವಾಸ್ತವವಾಗಿ ಹೇಳುವುದಾದರೆ, ನಮ್ಮ ವಕ್ರ ಐಹಿಕ ಪ್ರಲೋಭನೆಗಳನ್ನು ಪರಿವರ್ತಿಸಿ ನಮ್ಮನ್ನು ಸಜ್ಜನಿಕೆ, ಸಭ್ಯತೆ ಮತ್ತು ಸಹಜತೆಗಳ ಕಡೆ ತಿರುಗಿಸುವ ಶಿಕ್ಷಣ ದೊರೆಯುವುದು ಸತ್ಸಂಗದಿಂದ ಮಾತ್ರ. ಒಳ್ಳೆಯ ಸಹವಾಸದಿಂದ ವ್ಯಕ್ತಿಯ ಸ್ಥಾನಮಾನಗಳು ಉನ್ನತ ಗೊಳ್ಳುತ್ತವೆ. ಬಹುಮಟ್ಟಿಗೆ ನಮ್ಮ ವ್ಯಕ್ತಿತ್ವಕ್ಕೆ ನಮ್ಮ ಸಹವಾಸವೇ ಅಳತೆಗೋಲಾಗುತ್ತದೆ.

ಸತ್ಸಹವಾಸದಿಂದ ಸತ್ಪರಿಣಾಮ. ಅದರಿಂದ ವ್ಯಕ್ತಿಯ ಅಂತರಂಗ ಬಹಿರಂಗಗಳೆರಡಕ್ಕೂ ಸಂಸ್ಕಾರ ದೊರೆಯುತ್ತದೆ ಅವನು ಒಳಹೊರಗೆ ಪರಿಶುದ್ಧನಾಗುತ್ತಾನೆ. ಪರಿಸರಕ್ಕೆ ಬೇಕಾದ ಬದುಕು ಅವನದಾಗುತ್ತದೆ. 'ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ' ಎಂದು ಸರ್ವಜ್ಞ ಹೇಳಿರುವುದು ಅದಕ್ಕೇ.

❖

## ನಡು-ಹಾದಿ

ಸಂಕಷ್ಟಪಡುವುದಾಗಲಿ ಸೊರಗುವುದಾಗಲಿ ತಪಸ್ಸಾಧನೆಯೆನಿಸಲಾರದು. ಸಾಧಕನ ಸೊರಗಿದ ದೇಹದಂತೆ ಆತನ ಮನಸ್ಸೂ ಸೊರಗಿರುತ್ತದೆ. ರೋಗಗ್ರಸ್ತವಾದ ಮನಸ್ಸು ಯಾವುದನ್ನೂ ಗ್ರಹಣ ಮಾಡಿಕೊಳ್ಳಲಾರದು. ಕಾಯಕಷ್ಟದಿಂದ ಲೌಕಿಕ ಜ್ಞಾನವೂ ಲಭಿಸುವುದಿಲ್ಲ. ದುರ್ಬಲ ಪ್ರಕೃತಿಯಿಂದ ಇಂದ್ರಿಯ ಜಯ ಸಾಧ್ಯವೇ?

ಹಣತೆಯಲ್ಲಿ ಎಣ್ಣೆಗೆ ಬದಲಾಗಿ ನೀರನ್ನು ಸುರಿಯತಕ್ಕವನು ಕತ್ತಲೆಯನ್ನು ಹಿಮ್ಮೆಟ್ಟಿಸಲಾರ. ಕೊಳೆತ ಕಟ್ಟಿಗೆಯಿಂದ ಬೆಂಕಿಯನ್ನು ಹೊತ್ತಿಸಬೇಕೆನ್ನುವವನು ತನ್ನ ಸಾಹಸದಲ್ಲಿ ಸೋಲುವುದು ನಿಶ್ಚಿತ. ಐಹಿಕ ಸುಖಭೋಗಗಳ ಮೋಹವನ್ನು ತೊರೆಯದೆ, ಕಾಮಪಿಪಾಸೆಯನ್ನು ಹರಿದೊಗೆಯದೆ ಆತ್ಮವನ್ನು ಜಯಿಸುತ್ತೇನೆನ್ನುವ ಮಾತಿಗೆ ಯಾವ ಅರ್ಥವಿದೆ? ಅನಾಚಾರದ ಬದುಕನ್ನು ಸಾಗಿಸುತ್ತ ಮನಸ್ಸನ್ನು ಅಂಕಿತದಲ್ಲಿ ಇಟ್ಟುಕೊಂಡವರು ಜಗತ್ತಿನಲ್ಲಿ ಯಾರಾದರೂ ಇದ್ದಾರೆಯೇ?

ಸ್ವಂತದ ಪ್ರಶ್ನೆಯನ್ನು ಯಾವನು ಬಿಟ್ಟಿರುವನೋ ಅವನ ಬಳಿಯಲ್ಲಿ ಮೋಹಗಳೊಂದೂ ಸುಳಿಯಲಾರವು. ಅವನು ಈ ಲೋಕದ ಇಲ್ಲವೆ ಪರಲೋಕದ ಯಾವ ಸುಖವನ್ನು ಬಯಸುವುದಿಲ್ಲ. ಅವನು ಈ ಲೋಕದ ಇಲ್ಲವೆ ಪರಲೋಕದ ಯಾವ ಸುಖವನ್ನೂ ಬಯಸುವುದಿಲ್ಲ. ಬದುಕಿನ ಸ್ವಾಭಾವಿಕ ಅವಶ್ಯಕತೆಗಳು ಆತನನ್ನು ಅಡ್ಡಹಾದಿಗೆ ಕರೆದೊಯ್ಯಲಾರವು.

ಇಂದ್ರಿಯ ವ್ಯಾಮೋಹದಲ್ಲಿ ವಿನಾಶವಿದೆ. ಅದಕ್ಕೆ ಆಳಾದವನು ಅವನತಿ ಹೊಂದುತ್ತಾನೆ. ಬದುಕಿನ 'ಬೇಕು'ಗಳನ್ನು ಪೂರೈಕೆ ಮಾಡಿಕೊಳ್ಳುವುದು ಮಾತ್ರ ಪಾಪಾಚರಣೆಯಲ್ಲ. ದೇಹವನ್ನು ಆರೋಗ್ಯವಾಗಿ ಕಾಪಾಡಿಕೊಂಡು ಬರುವುದು ಮನುಷ್ಯ ಪಾಲಿನ ಕರ್ತವ್ಯವಾಗಿದೆ. ಸರಿಯಾದ ದೇಹ ಬಲ ಇಲ್ಲದೇ ಹೋದರೆ ಮನಸ್ಸನ್ನು ಬಲವಾಗಿಯೂ ನಿರ್ಮಲವಾಇಯೂ ಇಟ್ಟು ಜ್ಞಾನದೀಪವನ್ನು ಹೊತ್ತಿಸುವುದು ನಮಗೆ ಸಾಧ್ಯವಾಗ ಲಾರದು. ಕಮಲಪುಷ್ಪದ ಸುತ್ತಲೂ ನೀರು ಪಸರಿಸಿರುತ್ತದೆ. ಆದರೂ ಅದು ಹೂವಿನ ಯಾವ ಎಸಳನ್ನೂ ಒದ್ದೆಗೊಳಿಸುವುದಿಲ್ಲ.

–ಬುದ್ಧ





# ಕ್ರಾಂತಿಕಾರಿ ಶರಣ ಅಂಬಿಗರ ಚೌಡಯ್ಯ

–ಟಿ.ಆರ್. ಮಹಾದೇವಯ್ಯ *

ನಿರೂಪಕ : ಅಂಬಿಗರ ಚೌಡಯ್ಯ ಬಸವಣ್ಣನವರ ಸಮಕಾಲೀನ ಶರಣ. ೧೨ನೇ ಶತಮಾನದ ಕರ್ನಾಟಕದ ಬಾನಂಗಣದಲ್ಲಿ ಮಿನುಗಿದ ಸಹಸ್ರ ಸಂಖ್ಯೆಯ ಶರಣ ಸಮುದಾಯದಲ್ಲಿ ಪ್ರಜ್ವಲಿಸಿದ ಬೆಳ್ಳಿ ನಕ್ಷತ್ರ. ಕಲ್ಯಾಣದಲ್ಲಿ ಸಮಾವೇಶಗೊಂಡಿದ್ದ ಶರಣ ಸಮುದಾಯ ಬಸವಣ್ಣನವರ ನೇತೃತ್ವದಲ್ಲಿ ನವಸಮಾಜ ಕಟ್ಟ ಬಯಸಿದರು. ವರ್ಣ, ವರ್ಗ, ಶೋಷಣೆ ರಹಿತವಾದ ಮಾನವೀಯ ಮೌಲ್ಯವುಳ್ಳ ಸಮಾಜ ಅದಾಗಿತ್ತು. ಸಕಲ ಜೀವಾವಳಿಗೆ ಲೇಸ ಬಯಸುವ ಶರಣರ ಉದಾರ ನಿಲುವು ಬಹು ಜನರನ್ನು ಆಕರ್ಷಿಸಿತು. ನಾಡಿನ ನಾನಾ ಕಡೆಯಿಂದ, ಹೊರಗಿನ ಕಾಶ್ಮೀರ, ಒರಿಸ್ಸಾ, ಮಹಾರಾಷ್ಟ್ರ, ಆಫ್ಘಾನಿಸ್ಥಾನಗಳಿಂದ ಜನರು ತಂಡೋಪತಂಡವಾಗಿ ಬಂದರು. ಬಸವಣ್ಣನ ಅಪೂರ್ವವಾದ ವ್ಯಕ್ತಿತ್ವ, ಅವರ ಅದ್ಭುತ ಸಂಘಟನಾಶಕ್ತಿ ಎಲ್ಲರನ್ನು 'ಇವನಮ್ಮವ, ಇವನಮ್ಮವ' ಎಂಬ ಆತ್ಮೀಯಭಾವ ಬಂಧಿಸಿತು.

**ಧ್ವನಿ I:** ವರ್ಣಾಶ್ರಮ ಧರ್ಮದ ವ್ಯವಸ್ಥೆ ಜನರಲ್ಲಿ ತರ-ತಮ ಭೇದ ನಿರ್ಮಿಸಿತ್ತು. ಮೇಲು ವರ್ಗದವರು ಎಲ್ಲಾ ಸೌಲಭ್ಯಗಳನ್ನು ಪಡೆದು, ಕೆಳವರ್ಗದವರಿಗೆ ಅದು ದಕ್ಕದಂತೆ ಮಾಡಿ ಅವರನ್ನು ಶೋಷಣೆ ಮಾಡುತ್ತಿದ್ದ ರೀತಿ ಅಮಾನುಷವಾಗಿತ್ತು. ಅಸ್ಪೃಶ್ಯರ ಪಾಡಂತೂ ಘೋರವಾಗಿತ್ತು. ಹೆಣ್ಣುಮಕ್ಕಳ ಪಾಡೂ ಇದಕ್ಕಿಂತ ಭಿನ್ನವಾಗಿರಲಿಲ್ಲ. ಕೀಳರಿಮೆಯಿಂದ ಮೂಲೆಗುಂಪಾಗಿದ್ದ ಇಂಥಹವರಿಗೆ ಅವಕಾಶ ನೀಡಿ ಅವರೆಲ್ಲಾ ಆತ್ಮಗೌರವದಿಂದ ಬಾಳುವ ಅವಕಾಶ ನೀಡಿದರು ಶರಣರು.

**ಧ್ವನಿ II:** ಜೀವನೋಪಾಯಕ್ಕಾಗಿ ಕೈಕೊಂಡ ವೃತ್ತಿಗಳೇ ಸಮಾಜದಲ್ಲಿ ಜಾತಿಗಳು ಹುಟ್ಟಲು ಕಾರಣವಾದವು. ಕೈಕೊಂಡ ಕಸುಬುಗಳಲ್ಲಿ ಉತ್ತಮ, ಅಧಮ ಭಾವನೆ ಬೆಳೆಸಿದ್ದರಿಂದ ತಾರತಮ್ಯ ನೀತಿ ಬೆಳೆಯಿತು. ಇದನ್ನು ಹೋಗಲಾಡಿಸಲು ಶರಣರು ವೃತ್ತಿಗಳಲ್ಲಿರುವ ಮೇಲು-ಕೀಳು ಎಂಬ ಭಾವನೆಯನ್ನೇ ಬೇರು ಸಹಿತ ಕಿತ್ತರು. ಸತ್ಯ ಶುದ್ಧ ವೃತ್ತಿಯನ್ನು ಕಾಯಕವೆಂದು ಕರೆದರು. ಎಲ್ಲರೂ ದುಡಿದೇ ತಿನ್ನಬೇಕು. ದುಡಿಮೆ ಪ್ರಾಮಾಣಿಕವಾಗಿರಬೇಕು. 'ಕಾಯಕವೇ ಕೈಲಾಸ' ಎಂಬುದು ಶರಣರ ಘೋಷಣವಾಕ್ಯ! ಅಷ್ಟೇ ಅಲ್ಲ. ದುಡಿಮೆಯ ಫಲವನ್ನು ಹಂಚಿ ಉಣ್ಣುವ ದಾಸೋಹ ತತ್ವದಿಂದಾಗಿ ಸಮಾಜದಲ್ಲಿ ಆರ್ಥಿಕ ಸಮತೋಲನ ಸಾಧ್ಯವಾಯಿತು. ಕೀಳೆಂದು ಕಡೆಗಣಿಸಿದ್ದ ಉಪಯುಕ್ತ ಕಸುಬುಗಳೆಲ್ಲಾ ಅಭಿವೃದ್ಧಿ ಹೊಂದಿ ಸರ್ವಾಂಗೀಣ ಸಮಾಜ ರಚನೆಗೆ ನಾಂದಿಯಾಯಿತು.

**ಧ್ವನಿ I:** ಕೀಳೆಂದು ಕಡೆಗಣಿಸಲ್ಪಟ್ಟ, ಅವಕಾಶ ವಂಚಿತರಾಗಿ ಮೂಲೆ ಸೇರಬೇಕಾದ ಅನೇಕ ಚೇತನಗಳು ಶರಣರ ಕರುಣೆಯಿಂದ ಬಾಳಿಗೆ ಬೆಳಕ ಕಂಡವು. ಅಂಥಹವರಲ್ಲಿ ತನ್ನ ವಿಶಿಷ್ಟ ಜಾಯಮಾನದಿಂದ ನಮ್ಮ ಗಮನ ಸೆಳೆಯುವ ವ್ಯಕ್ತಿ ಅಂಬಿಗರ ಚೌಡಯ್ಯ. ಆತ ವೃತ್ತಿಯಲ್ಲಿ ಅಂಬಿಗ; ದೋಣಿ ನಡೆಸುವವನು. ಪ್ರವೃತ್ತಿಯಲ್ಲಿ ವಿಚಿಕಿತ್ಸಕ ದೃಷ್ಟಿಯ ವಿಚಾರವಂತ; ಬಿಚ್ಚುಮನಸ್ಸಿನ ಕ್ರಾಂತಿ ಪುರುಷ.

**ನಿರೂಪಕ :** ಈ ದಡದಿಂದ ಆಚೆ ದಡಕ್ಕೆ ತನ್ನ ದೋಣಿಯಿಂದ ಜನರನ್ನು ಕರೆದೊಯ್ಯುವ ಯಾಂತ್ರಿಕ ಬದುಕಿನಲ್ಲಿ

* ನಂ.136, 1ನೇ ಮುಖ್ಯ ರಸ್ತೆ, 1ನೇ ವಿಭಾಗ, ನಾಗರಭಾವಿ 3ನೇ ಹಂತ, ಬೆಂಗಳೂರು – 560 072.

# ಯಶಸ್ವೀ ಜೀವನದ ಮೆಟ್ಟಿಲುಗಳು

-ಡಾ॥ ಆರ್.ಬಿ. ಚಿಲುಮಿ *

ಮನುಷ್ಯ ಪ್ರಯತ್ನಸಿದತ್ತ ಯಾವತ್ತೂ ದಾಪುಗಾಲ ಹಾಕುತ್ತಲಿರಬೇಕು, ಯಾವತ್ತೂ ಸದ್ಗುಣಗಳನ್ನೇ ಮೆಲುಕು ಹಾಕುತ್ತಲಿರಬೇಕು. ವಿದ್ಯಾವಂತನಾಗುವುದು ಇಂದಿನ ಅಗತ್ಯತೆಯಲ್ಲೊಂದು. ವಿದ್ಯಾಸಂಪಾದನೆಯ ಜೊತೆ ಜೊತೆಗೆ ವಿನಯವೂ ಕೂಡಿರಬೇಕು. **'ವಿದ್ಯಾ ವಿನಯೇನ ಶೋಭಿತೆ'** ಎಂದಿರುವರು. ಪ್ರತಿಯೊಬ್ಬ ಯಶಸ್ವೀ ಪುರುಷನ ಹಿಂದೆ ಸ್ತ್ರೀ ಇರುತ್ತಾಳೆಯೆಂಬ ಹೇಳಿಕೆಯುಂಟು. ತಾಯಿಯೇ ಮಗುವಿನ ಮೊದಲ ಗುರುವಾಗಿ ಆತನನ್ನು ಪೋಷಿಸಿ, ಬೆಳೆಸುತ್ತಾ, ಧೈರ್ಯ-ಎದೆಗಾರಿಕೆಗಳನ್ನು ತುಂಬುತ್ತಾಳೆ. ತಾಯಿಯಾದವಳು ತನ್ನ ಎದೆಹಾಲನ್ನುಡಿಸುವಾಗ ಇಂಥ ಉದಾತ್ತವಾದ ನೀತಿಯ ಮಾತುಗಳನ್ನು ಹೇಳುತ್ತ ಯಶಸ್ವೀ ಜೀವನದ ಗುಟ್ಟುಗಳನ್ನು ಆ ಮಗುವಿನ ಎದೆಯಲ್ಲಿ ಬಿತ್ತುತ್ತಾಳೆ. ಎಲ್ಲ ತಾಯಂದಿರರ ಅಪೇಕ್ಷೆಯು ಇದುವೇ ಆಗಿರುತ್ತದೆ. ಆನಂತರ ಬೆಳೆಯುತ್ತಲಿರುವ, ಬೆಳೆದ ಮಗು ಪರಿಸರದ ಕೂಸಾಗಿ ಪರಿವರ್ತಿತವಾಗುತ್ತದೆ. ಆ ಮಗುವಿಗೆ ಒಳ್ಳೆಯ ಸಂಸ್ಕಾರ ಸಿಕ್ಕರೆ ದೇಶಾಭಿಮಾನಿಯಾಗುತ್ತಾನೆ. ತನ್ನ ಭವಿಷ್ಯ ರೂಪಿಸಿಕೊಳ್ಳುವುದರೊಂದಿಗೆ ನಾಡಿನ ಅಭಿಮಾನ-ದೇಶಾಭಿಮಾನ ರೂಢಿಸಿಕೊಳ್ಳಬಲ್ಲವನಾಗುತ್ತಾನೆ. ಆತನ ಜೀವನದ ಯಶಸ್ಸಿಗೆ ವಿನಯವೇ ಭೂಷಣ ವಾದುದು.

ಮದ, ಮತ್ಸರ, ಲೋಭ, ಮೋಹ ಮುಂತಾದ ತಾಮಸಿಕ ಗುಣಗಳನ್ನು ತೊರೆಯಲೇಬೇಕು. ಅದರಲ್ಲೂ ಅಹಂಕಾರ ಗುಣ ಬರಲೇಬಾರದು. ಅದು ಎಂಥಹವರನ್ನೂ ಹಾಳು ಮಾಡುತ್ತದೆ ಮತ್ತು ಅದು ಎಂಥಹವರನ್ನೂ ಬಿಟ್ಟಿಲ್ಲ. ಅದು ಮನುಷ್ಯನನ್ನು ಅಧಃಪತನಗೊಳಿಸುತ್ತದೆ. ಧನಮದ, ವಿದ್ಯಾಮದ, ಅಧಿಕಾರ ಮದ ಇವುಗಳಲ್ಲಿ ಯಾವುದೇ ತರಹದ ಅಹಂಕಾರವಿರಬಾರದು. ಮನುಷ್ಯನಿಗೆ ವಿನಯದ ನಡಿಗೆಯೇ ಮುಖ್ಯವಾದುದು. ಮನುಷ್ಯನಿಗೆ ಗುರುಭಕ್ತಿ ಮತ್ತು ಮಿತಭುಕ್ತಿಯಿರಬೇಕು. ಆವಾವ ಕೆಲಸವನು ಮಾಡಲು ಜಾತಕ, ಭವಿಷ್ಯ ಕೇಳಲೇಬಾರದು. ಮುಹೂರ್ತ ಇರುವುದೋ ಇಲ್ಲವೋ ಇಲ್ಲದರ ಅನುಮಾನ ಬೇಡ. ಒಳ್ಳೆಯದಕ್ಕೊಂದು ಮುಹೂರ್ತ, ಕೆಟ್ಟದ್ದಕ್ಕೊಂದು ಮುಹೂರ್ತವಿದೆ ಯೆಂದು ಕೇಳುವುದು, ಹೇಳುವುದು ತಪ್ಪೆಂದೆನಿಸುತ್ತದೆ. ದಿನದ ೨೪ ಗಂಟೆಗಳನ್ನು ದಯಪಾಲಿಸಿದವರು ಆ ಜಗನ್ನಿಯಾಮಕನಾದ ಪರಮಾತ್ಮನು! ಆತ ಯಾವತ್ತೂ ಒಳ್ಳೆಯದನ್ನೇ ಮಾಡುವನು. ಅಂದ ಬಳಿಕ ಮುಹೂರ್ತದಲ್ಲಿ ಇಷ್ಟವಿದ್ದರೆ ಮಾಡಿಸಿಕೊಳ್ಳಿ ಕಷ್ಟ ವಿದ್ದರೆ ಬಿಟ್ಟುಬಿಡಿರಿ. ಅಂದರೆ ನಂಬಲಿ-ನಂಬದಿರಲಿ ಅದು ನಿರಂತರವಾಗಿ ಕಾರ್ಯ ನಡೆಯುತ್ತಿರುತ್ತದೆ.

ಯಾವುದೇ ವ್ಯಕ್ತಿ ಜೀವನದಲ್ಲಿ ಯಶಸ್ಸಿ ಪಡೆಯಲು ಹಂಬಲಿಸುತ್ತಿರುತ್ತಾನೆ. ಅದು ಅವನ ಸಹಜ ಗುಣವೂ ಆಗಿದೆ. 'ಸೋಲೇ ಗೆಲುವಿನ ಮೆಟ್ಟಿಲು' ಎಂಬುದೊಂದು ಮಾತಿದೆ. ಆದರೂ ಗೆದ್ದೇ ತೀರುತ್ತೇವೆ ಎಂಬ ಹಂಬಲ, ಆಶೆಯಿರಬೇಕು. ಅದನ್ನು ಛಲದಿಂದ ಈಡೇರಿಸುವಂತಹ ಗುಣವಿರಬೇಕು. ಅದಕ್ಕೆ ಮಾನವನು ಪಾಲಿಸಬೇಕಾದ ೮ ಸಂಗತಿಗಳು ಪ್ರಮುಖವಾದ ಪಾತ್ರ ವಹಿಸುತ್ತವೆ. ೧) ಸಕಾರಾತ್ಮಕ ಮನೋಭಾವ ೨) ಆತ್ಮವಿಶ್ವಾಸ ೩) ಉದಾತ್ತವಾದ ಗುರಿಯಿರಬೇಕು, ಧ್ಯೇಯವಿರಬೇಕು. ೪) ಶ್ರದ್ಧಾಭಕ್ತಿಯಿಂದ ಪ್ರಯತ್ನ ಮಾಡುವಿಕೆ. ೫) ಉದ್ಯೋಗ ಶೀಲತೆಯ ಗುಣ. ೬) ಸಮಸ್ಯೆಗಳ ಪರಿಹಾರ ಮಾಡಿಕೊಳ್ಳು ವುದು. ೭) ಸಮಯ ಪ್ರಜ್ಞೆ ಮತ್ತು ಸಮಯ ನಿರ್ವಹಣೆ. ೮) ಕರ್ತವ್ಯ ಪ್ರಜ್ಞೆಯಿರಬೇಕು.

ಮೇಲ್ಕಾಣಿಸಿದ ಪ್ರಮುಖ ಅಂಶಗಳನ್ನು ಯಾವಾತನು ರೂಢಿಸಿಕೊಂಡು ಕಾರ್ಯರೂಪಕ್ಕೆ ತರಬಲ್ಲನೋ ಆತ ಖಂಡಿತ ವಾಗಿಯೂ ಜೀವನದಲ್ಲಿ ಯಶಸ್ಸಿ ಹೊಂದಬಲ್ಲ. ಇವೇ ಯಶಸ್ಸಿನ ಮೂಲ ಮೆಟ್ಟಿಲುಗಳು. ಇವುಗಳನ್ನು ನಕಾರಾತ್ಮಕ ಭಾವನೆಯಿಂದ ನೋಡುವಿಕೆ ಇರಲೇಬಾರದು. ನಕಾರಾತ್ಮಕ ಗುಣದಲ್ಲಿ ಏನೂ ಇಲ್ಲದಂತೆಯೇ ಮಾಡುವ ಗುಣವಿರುತ್ತದೆ. ಆದುದರಿಂದ ಯಾವುದಕ್ಕೂ, ಯಾವತ್ತೂ ಸಕಾರಾತ್ಮಕವಾಗಿಯೇ ವಿಚಾರಿಸುತ್ತಿರ ಬೇಕು. ಅದನ್ನು ಶಿಸ್ತು, ಸಂಯಮ, ಪ್ರಾಮಾಣಿಕತೆಯಿಂದ ಪಾಲಿಸಬೇಕಾಗುತ್ತದೆ. ಯಶಸ್ಸು ಸಾಧಿಸುವಾಗ ಆತಂಕಗಳು, ತೊಂದರೆಗಳು ಬಿರುಗಾಳಿಯಂತೆ ಎಡೆಬಿಡದೆ ಬಂದರೂ ಧೈರ್ಯ-ಸಮಾಧಾನದಿಂದ ಅವುಗಳನ್ನು ಎದುರಿಸಬೇಕು. ಇಂಥ ಪ್ರಸಂಗದಲ್ಲಿ ಭಯ-ಅಧೈರ್ಯಗಳು ದಾಳಿ ಮಾಡಿದರೂ ಮನಸ್ಸಿನಿಂದ ಅವುಗಳನ್ನು ದೂರಗೊಳಿಸಿಕೊಳ್ಳಬೇಕು. ಜವಾಬ್ದಾರಿಯಿಂದ ಯಾವುದೇ ಕಾರ್ಯವನ್ನು ನಿರ್ವಹಿಸುವುದು, ಮನದಲ್ಲಿರುವ ಕೀಳರಿಮೆಯನ್ನು ಹೋಗಲಾಡಿಸಿಕೊಳ್ಳುವುದು, ಕನಸು-ಮನಸ್ಸಿನಲ್ಲಿಯೂ ಒಳ್ಳೆಯದನ್ನು ಬಯಸುವುದು, ಕ್ರಿಯಾಶೀಲತೆ ಯಿಂದಿರುವುದು, ನಿರಂತರ ಪ್ರಯತ್ನ ಮಾಡುತ್ತಲಿರುವುದು, ಟೀಕೆಗಳಿಗೆ ಹೆದರದಿರುವುದು, ಗೆದ್ದು ಗೆಲಿಸಿ ನಗುವುದಕ್ಕೆ ಕಲಿಯುವುದು ಮತ್ತು ಕಲಿಸುವುದು. ಈ ಮುಂತಾದ ಸದ್ಗುಣಗಳನ್ನು ಅಳವಡಿಸಿಕೊಂಡು ಕಾರ್ಯೋನ್ಮುಖನಾಗಿರಬೇಕಾಗುತ್ತದೆ. ಖಂಡಿತವಾಗಿಯೂ ಮಾಡಿಯೇ ತೀರುತ್ತೇನೆಂಬ ಛಲ ಅಥವಾ ಗುರಿ ಯಾವಾತನಲ್ಲಿರುತ್ತದೆಯೋ ಆತ ಸಕಾರಾತ್ಮಕವಾಗಿ ಲಾಭ ಪಡೆದು ಜೀವಿಸಬಲ್ಲ. ಅದು ಓದುವುದರಿಂದ, ಕೇಳುವುದರಿಂದ, ಮಾತನಾಡುವುದರಿಂದ ಸಕಾರಾತ್ಮಕ ಗುಣಗಳನ್ನು ಸಂಗ್ರಹಿಸಿ ಬೆಳೆಸಿಕೊಳ್ಳಬಹುದು. ಇದುವೇ ಯಶಸ್ವೀ ಜೀವನದ ಮೆಟ್ಟಿಲುಗಳು!!

* ವಿಶ್ರಾಂತ ಪ್ರಾಧ್ಯಾಪಕರು, 'ಹೊಂಬೆಳಕು' ಮನೆ ನಂ.೧೧೨/೧/೯, ರಾಧಾಕೃಷ್ಣನಗರದ ಹತ್ತಿರ, ಜಲದರ್ಶಿನಿಪುರಂ, ಧಾರವಾಡ.







# ಸಹವಾಸ

-ಗೊ.ರು. ಚನ್ನಬಸಪ್ಪ *

ಸಹವಾಸವಿಲ್ಲದ ಒಂದು ಜೀವಿಯೂ ಈ ಸೃಷ್ಟಿಯಲ್ಲಿಲ್ಲ. ಸಹವಾಸ ತಪ್ಪಿದರೆ ಇಲ್ಲಿ ಏನೂ ಇಲ್ಲ. ಪ್ರಕೃತಿಗೆ ಸ್ಪಂದಿಸುವ ಜೀವಿ ಪ್ರಾಣಿಯಿರಲಿ, ಸಸ್ಯವಿರಲಿ, ಮಾನವನಿರಲಿ ಸಹವಾಸ ಅನಿವಾರ್ಯ. ಸೃಷ್ಟಿಯ ಬೆಡಗಿರುವುದೇ ಈ ಸಹವಾಸದಲ್ಲಿ.

ಸಂವೇದನಶೀಲ ಮಾನವನಂತೂ ಸಹವಾಸವಿಲ್ಲದೆ ಇರಲಾರ. ಅವನ ಬದುಕಿಗೆ ನೀರು ಗಾಳಿಯ ಸಹವಾಸ ಬೇಕೇ ಬೇಕು. ಬಯಲಂತೂ ಅವನ ಎಡೆಬಿಡದ ಸಹವಾಸ. ಭೂಮಿ ಅವನು ನಿಲ್ಲುವ ನೆಲೆ. ಇನ್ನು ಬೆಂಕಿ ಅಪಾಯಕರ ವಾದರೂ ಅದನ್ನು ಬಿಟ್ಟಿರುವಂತಿಲ್ಲ. ಹೀಗೆ ಪಂಚಭೂತ ಗಳ ಸಹವಾಸದಲ್ಲೇ ಮಾನವನ ಬದುಕು; ಬಾಳು. ಅವವೇ ದೇಹವೇ ಪಂಚಭೂತಾತ್ಮಕ.

ಮಾನವನ ಅನುಭವಕ್ಕೆ ಬಂದಿರುವಂತೆ ಪ್ರಶಾಂತ ಪ್ರಕೃತಿಯ ಸಹವಾಸ ಹಿತಕರ, ಅಗತ್ಯ ಮತ್ತು ಸುರಕ್ಷಿತ. ಅದೇ ಪ್ರಕ್ಷುಬ್ಧ ಪ್ರಕೃತಿಯ ಸಹವಾಸ ಅಪಾಯಕರ, ಅನಗತ್ಯ ಮತ್ತು ಆರಕ್ಷಿತ. ಹಾಗೆಯೇ ಮಾನವ-ಮಾನವ ಸಹವಾಸವೂ ಕೂಡ. ಸತ್ಸಹವಾಸವಾದರೆ ಅದು ಪ್ರಶಾಂತ ಪ್ರಕೃತಿ. ದುಸ್ಸಹವಾಸವಾದರೆ ಪ್ರಮತ್ತ ಪ್ರಕೃತಿ.

ಪರಿಣಾಮ ಮತ್ತು ಪ್ರಭಾವ ಸಹವಾಸದ ಸಹಜ ಗುಣ. ಸುಣ್ಣ ಮುಟ್ಟಿದರೆ ಸುಣ್ಣ; ಬಣ್ಣಮುಟ್ಟಿದರೆ ಬಣ್ಣ. ವಿಚಿತ್ರ ವೆಂದರೆ ಕೈಗೆ ಕೆಸರು ಅಂಟಿಕೊಂಡಷ್ಟು ಸುಲಭವಾಗಿ ಮೊಸರು ಅಂಟಿಕೊಳ್ಳದಿರುವುದು. ದುಸ್ಸಂಗ-ಸತ್ಸಂಗಗಳೂ ಹಾಗೆಯೇ. ಮನುಷ್ಯ ದುಸ್ಸಂಗದಿಂದ ಬೇಗ ಪ್ರಭಾವಿತ ನಾಗುತ್ತಾನೆ. ಒಮ್ಮೆ ಅದರಲ್ಲಿ ಅವನು ಸಿಕ್ಕಿಕೊಂಡನೆಂದರೆ ಅದರಿಂದ ಹೊರಬರಲಾರದಷ್ಟು ದುರ್ಬಲನಾಗಿಬಿಡುತ್ತಾನೆ.

ಒಂದು ಸ್ವಾರಸ್ಯದ ಪ್ರಕರಣ ಹೀಗಿದೆ; ಕುಡಿತದ ಚಟಕ್ಕೆ ಬಲಿಯಾಗಿದ್ದ ಮಗನಿಗೆ ಆತನ ತಂದೆ, 'ಕುಡಿತ ಒಳ್ಳೆಯದಲ್ಲ' ಎಂದು ಬುದ್ಧಿವಾದ ಹೇಳುತ್ತಾನೆ. ಮಗನೂ ಬುದ್ಧಿವಂತನೇ. 'ಅಪ್ಪಾ ನೀನೊಮ್ಮೆ ಕುಡಿದು ನೋಡು, ನಂತರ ನನಗೆ ಹೇಳು. ಬೇಡವೆಂದರೆ ಬಿಟ್ಟುಬಿಡುತ್ತೇನೆ' ಎಂದು ತಂದೆಗೆ ಹೇಳಿದ. ಹಾಗಾದರೂ ಮಗ ಕುಡಿಯುವುದನ್ನು ಬಿಟ್ಟಾನು ಎಂಬ ಆಸೆಯಿಂದ ತಂದೆ ತಾನೂ ಒಮ್ಮೆ ಕುಡಿದ. ಕುಡಿತದ ಅಮಲು ಪ್ರಾಮಾಣಿಕವಾಗಿ ತನ್ನ ಕೆಲಸ ಮಾಡಿತು. ಮಗನೇ ಬಂದು ತಂದೆಯನ್ನು ಕೇಳಿದ-'ಅಪ್ಪಾ ಕುಡಿಯುವುದನ್ನು ಬಿಡಲೇ?' ಎಂದು. ಆಗ ತಂದೆ ಹೇಳಿದ-'ನೀನು ಬಿಟ್ಟರೂ ನಾನು ಬಿಡುವುದಿಲ್ಲ' ಎಂದು. ಇದನ್ನೇ ನಾವು 'ಸಹವಾಸ ದೋಷ' ಎನ್ನುವುದು.

ಸಹವಾಸಗಳು ಹಲವಾರು. ವಸ್ತು ಅಥವಾ ವಿಚಾರದ ಸಹವಾಸವಿರಬಹುದು. ಇನ್ನೊಂದು ಜೀವಿಯ ಸಹವಾಸ ವಿರಬಹುದು. ನಮಗೆ ತಿಳಿದೋ ತಿಳಿಯದೆಯೋ ಒಂದೊಂದು ಸಹವಾಸಕ್ಕೆ ನಾವು ಸಿಲುಕುತ್ತೇವೆ. ಸಹವಾಸ ಗಳು ಎಷ್ಟು ಬಗೆಯೋ ಅವುಗಳ ಸ್ವರೂಪ, ಸಂಬಂಧ, ಪರಿಣಾಮಗಳಲ್ಲೂ ಅಷ್ಟು ಬಗೆ. ರಾಜಕಾರಣಿಯ ಸಹವಾಸಕ್ಕಿಂತ ಬುದ್ಧಿಜೀವಿಯ ಸಹವಾಸ ಭಿನ್ನವಾದುದು. ಸಂಸಾರಿಯ ಸಹವಾಸದ ಸುಖವನ್ನು ಸನ್ಯಾಸಿಯ ಸಹವಾಸದಲ್ಲಿ ನಿರೀಕ್ಷಿಸುವುದು ಕಷ್ಟ ಶ್ರೀಮಂತರ ಸಹವಾಸ ಒಂದು ಬಗೆಯಾದರೆ ಶ್ರಮಜೀವಿಯ ಸಹವಾಸ ಒಂದು ಬಗೆ. ಕಳ್ಳರು-ಕುಡುಕರ ಸಹವಾಸವೇ ಬೇರೆ; ಸಾಹಸಿ, ಸಭ್ಯರ ಸಹವಾಸವೇ ಬೇರೆ. ಹೆಣ್ಣು-ಹೊನ್ನುಗಳ ಸಹವಾಸ ಕ್ಕಂತೂ ಸಾವಿರಾರು ಕಥೆಗಳಿವೆ. ಹೀಗೆಯೇ ದಡ್ಡರ ಸಹವಾಸ, ದಳ್ಳಾಳಿಗಳ ಸಹವಾಸ, ವಕೀಲ-ವೈದ್ಯರ ಸಹವಾಸ, ತಾಂತ್ರಿಕ-ಮಾಂತ್ರಿಕರ ಸಹವಾಸ, ಹುಡುಗ-ಮುದುಕರ ಸಹವಾಸ, ಕೋತಿ-ಕರಡಿಗಳ ಸಹವಾಸ, ಬೀಡಿ-ಸಿಗರೇಟು ಸಹವಾಸ, ನಾಟಕ-ಸಿನೆಮಾ ಸಹವಾಸ ಹೀಗೆ ಲಕ್ಕವಿಲ್ಲದಷ್ಟು ಸಹವಾಸಗಳಿವೆ. ಇವುಗಳಲ್ಲಿ ಕೆಲವು ಬೇಕು; ಕೆಲವು ಬೇಡ. ಬೇಕು ಬೇಕಗಳೇನೇ ಇದ್ದರೂ,

* ೪೦೬, ಪ್ರಣಾಮ, ಎಫ್ ರಸ್ತೆ, ರಾಜರಾಜೇಶ್ವರಿನಗರ, ಬೆಂಗಳೂರು-೫೬೦ ೦೯೮.

ವಚನಗಳ ಮೂಲಕ ವ್ಯಕ್ತಗೊಳಿಸಿ ನುಡಿದಂತೆ ನಡೆದರು. ಈ ವಚನಗಳಲ್ಲಿ ಬದುಕಿನ ಸುಧೆ-ಸಾರವಿದೆ.

*'ಅಂಗಭಂಗಿ, ಕಾಮಭಂಗಿ, ಮನಭಂಗಿ,*
*ಇಂತೀ ತ್ರಿಭಂಗಿ, ತ್ರಿಸುಧೆಯ ಕುಡಿದವರು*
*ನಿಮ್ಮ ನಿಜವನೆತ್ತಬಲ್ಲರಯ್ಯಾ ಕೂಡಲಚನ್ನಸಂಗಮದೇವಾ'*

ಬದುಕಿಗೆ ಅನ್ನ, ಐಶ್ವರ್ಯ, ಆಯುಷ್ಯ ಬೇರೆ ಬೇಕು. ಪ್ರತಿಯೊಬ್ಬರೂ ತಮ್ಮ ತಮ್ಮ ಆಸೆ-ಆಕಾಂಕ್ಷೆಗಳನ್ನು ಹದ್ದುಬಸ್ತಿನೊಳಗೆ ಇಟ್ಟುಕೊಂಡು ಬದುಕಿದರೆ ಎಲ್ಲವೂ ಸರಿಯಾಗಿಯೇ ಇರುತ್ತದೆ. ಆದರೆ ಧನ, ಅಧಿಕಾರ, ಅಂತಸ್ತು ಮದ-ಮತ್ಸರಕ್ಕೆ ಗುರಿಯಾದರೆ ಬದುಕು ಅಸಹ್ಯಗೊಳ್ಳುತ್ತದೆ. ಅಂಧಕಾರಕ್ಕೂ ಗುರಿಯಾಗುತ್ತದೆ. ಸಹ್ಯತೆ, ಸಹೃದಯತೆ, ಸಮ್ಯಕ್ ಜ್ಞಾನವು ಮನುಷ್ಯನಿಗೆ ಪ್ರಾಪ್ತವಾಗಬೇಕಾದರೆ ತ್ರಿಭಂಗಿ-ತ್ರಿಸುಧೆಯ ಕುಡಿಯದಿರಬೇಕೆಂಬುದನ್ನು ಚೆನ್ನ ಬಸವಣ್ಣನವರು ನಿಖರಗೊಳಿಸಿ ಹೇಳಿದ್ದಾರೆ. ಮದ-ಮತ್ಸರಗಳು ದಯೆಯಿಂದ ದೂರವಿರುವಂತೆ ನೋಡಿಕೊಳ್ಳುತ್ತವೆ. ದಯೆ ವಚನಕಾರ ವಚನಕಾರ್ತಿಯರ ಆದ್ಯತೆ ಆಗಿದೆ. ಬಸವಣ್ಣನವರು ಅಸಂಖ್ಯಾತ ಶರಣರೊಂದಿಗೆ ಜಗತ್ತಿಗೆ ಭಕ್ತಿ ಮಾರ್ಗದೊಂದಿಗೆ ಕಾಯಕ, ದಾಸೋಹ, ಅನುಭಾವದ ಮೂಲಕ ಸ್ವಾವಲಂಬಿ ಸಮಾಜವನ್ನು ನಿರ್ಮಿಸಿದರು. 'ಅಂದು ಕಲ್ಯಾಣ ರಾಜ್ಯದಲ್ಲಿ ಬೇಡುವವರು ಇರಲಿಲ್ಲ' ಎಂಬುದು ಶರಣರ ಕಾಯಕ ನಿಷ್ಠೆಯನ್ನು ದೃಢಪಡಿಸುತ್ತದೆ.

ಬಸವಣ್ಣನವರು ಕಾಯಕದೊಳಗೆ ನಿರತರಾದವರಿಗೆ ಆಗುತ್ತಿರುವ ಕಿರುಕುಳ ನಿವಾರಿಸುವಲ್ಲಿ ಆಸಕ್ತಿಯನ್ನು ವಹಿಸಿದ್ದು ಗಮನಾರ್ಹ. ವಿವಿಧ ಕೆಲಸಗಳಲ್ಲಿ ತೊಡಗಿದವರು ಸಂಘಟಿತರಾಗುವಂತೆ ನೋಡಿಕೊಂಡ ಬಸವಣ್ಣನವರು ಕುಲದಿಂದ ದೊಡ್ಡವರಾಗುವುದು ಉಚ್ಛ ಕುಲದವರೆದು ಬೀಗುವುದೆಲ್ಲ ಸರಿಯಿಲ್ಲೆಂದು ಸಾಧಿಸಿದವರು. ಕುಲದ ಮೂಲವನ್ನು ಸುಸಂಗತವಾಗಿ ವಿವರಿಸಿದ್ದು ಇಲ್ಲಿ ಉಲ್ಲೇಖನೀಯ.

*'ಕೊಲುವನೇ ಮಾದಿಗ, ಹೊಲಸ ತಿಂಬುವನೇ ಹೊಲೆಯ !*
*ಕುಲವೇನೋ, ಆವಂದಿರ ಕುಲವೇನೋ ?*
*ಸಕಲ ಜೀವಾತ್ಮರಿಗೆ ಲೇಸನೇ ಬಯಸುವ*
*ನಮ್ಮ ಕೂಡಲಸಂಗನ ಶರಣರೇ ಕುಲಜರು'*

ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವ ದಿಟ್ಟ ನಿಲುವು ತಾಳಿದ ಬಸವಾದಿ ಶರಣರು ತಮ್ಮ ತಮ್ಮ ಕುಲಮದ ಅಳಿಸಿಕೊಂಡು ಬಾಳಿದ್ದು ಸ್ವಾರಸ್ಯಕರವಾಗಿದೆ. ಬಸವಣ್ಣನವರು ನಡೆ-ನುಡಿಗಳನ್ನು ಏಕತೆಗೊಳಿಸಿಕೊಂಡು ಸಮಾಜವನ್ನು ಬೆಳೆಸಿದರು. ಅವರು ನಿರ್ಮಿಸಿದ ಸಮಜದಲ್ಲಿ ದಯವೇ ಧರ್ಮವಾಗಿ ಮಾರ್ಪಟ್ಟಿದ್ದು ಮರೆಯಲಾಗದ ಸಂಗತಿ

*'ದಯವಿಲ್ಲದ ಧರ್ಮವುದೇವುದಯ್ಯ ?*
*ದಯವೇ ಬೇಕು ಸಕಲಪ್ರಾಣಿಗಳೆಲ್ಲರಲ್ಲಿಯೂ*
*ದಯವೇ ಧರ್ಮದ ಮೂಲವಯ್ಯ;*
*ಕೂಡಲಸಂಗಯ್ಯನಂತಲ್ಲ ದೊಲ್ಲನಯ್ಯ'*

ಇವತ್ತಿನ ಪರಿಸ್ಥಿತಿಯಲ್ಲೂ ಈ ವಚನದ ತಾತ್ಪರ್ಯ ಮನುಕುಲದ ಶ್ರೇಯಸ್ಸಿಗೆ ದಾರಿದೀಪವಾಗಿದೆ. ಧರ್ಮದ ಹೆಸರಿನಲ್ಲಿ ಹೆಚ್ಚುಗಾರಿಕೆಯಾಗಿ ನಡೆಯುತ್ತಿರುವ ಕದನ, ಕಾಳಗ, ಭಯೋತ್ಪಾದನೆಗಳು ನಿಲ್ಲಿಸುವಂತೆ ಮಾಡುವ ಅಗತ್ಯವಿದೆ. ನಮ್ಮನಮ್ಮಲ್ಲಿ ವಿಶ್ವಾಸದ ಕೊರತೆಯು ಎಲ್ಲಿಲ್ಲದ ಹಿಂಸಾ ವೃತ್ತಿಗೆ ಕಾರಣವಾಗುತ್ತಲಿದೆ. ನಮ್ಮ ಮನಸ್ಸುಗಳು ಗೊಂದಲದಲ್ಲಿವೆ ಹಾಗೂ ಸ್ವಾರ್ಥಪರವಾಗಿವೆ. ಈ ತೆರನಾದ ಮನೋಭಾವವು ಸ್ವಾವಲಂಬನೆಯ ಸೂತ್ರಕ್ಕೆ ಪೂರಕವಾಗದ ವಾತಾವರಣ ನಿರ್ಮಾಣ ಮಾಡಿ ಮನುಷ್ಯತ್ವವಿಲ್ಲದ ನಡೆ-ನುಡಿಗೆ ನಾಂದಿ ಹಾಡುತ್ತವೆ. ಮನುಷ್ಯನು ದೈವತ್ವಕ್ಕೆ ಏರುವ ಮೆಟ್ಟಿಲು ಸ್ವಾವಲಂಬನೆ ಮತ್ತು ದಯೆ ಆಗಿರುತ್ತದೆ. ಬಸವಣ್ಣನವರು ಸ್ವಾವಲಂಬನೆಯು ಸ್ವಪರಿಶ್ರಮ ಸ್ವ-ಸಹಾಯ ಮತ್ತು ಸಹಕಾರದಿಂದ ಸಾಧ್ಯವೆಂದು ಪ್ರತಿಪಾದಿಸಿದ್ದಾರೆ. ಎಲ್ಲರೊಡನೆ ಹೊಂದಿಕೊಂಡು ಹೋದಲ್ಲಿ ಸ್ವಾವಲಂಬನೆಗೆ ಅರ್ಥಬರುತ್ತದೆ. ನಮ್ಮ ನುಡಿ-ನಡೆಗಳಲ್ಲಿ ಪರೋಪಕಾರದ ತುಡಿತ-ಮಿಡಿತ ಹೆಚ್ಚಾದಲ್ಲಿ ಜಗಳಕ್ಕೆ ಆಸ್ಪದವೇ ಸಿಗಲಾರದು. ಕ್ರೌರ್ಯವು ಎಂದೂ ಮನುಷ್ಯನಿಗೆ ಯಶಸ್ಸಿ ತರಲಾರದು.

*'ಕಂಡ ಭಕ್ತರಿಗೆ ಕೈಮುಗಿದಾತನೇ ಭಕ್ತ;*
*ಮೃದುವಚನವೆ ಸಕಲಜಪಂಗಳಯ್ಯ*
*ಮೃದುವಚನವೆ ಸಕಲತಪಂಗಳಯ್ಯ*
*ಸದುವಿನಯವೇ ಸದಾಶಿವನೊಲಿಮೆಯಯ್ಯಾ,*
*ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ'*





ಸದುವಿನಯ ಗಳಿಸುವುದೆಂದರೆ ಚಾರಿತ್ರ್ಯವನ್ನು ಕರಗತ ಮಾಡಿಕೊಳ್ಳುವುದೇ ಆಗಿದೆ. ಚಾರಿತ್ರ್ಯ ನಿರ್ಮಾಣದ ತಳಹದಿಯ ಸತ್ಯಶುದ್ಧ ಕಾಯಕವೆಂದು ಪ್ರಯೋಗಿಸಿ ತೋರಿಸಿದ ಬಸವಣ್ಣನವರು ದಯೆ-ಅಂತಃಕರಣದ ಜ್ಯೋತಿಯನ್ನು ಪ್ರಜ್ವಲಿಸಿದ್ದಾರೆ. ಅವರು ಶೋಷಣೆ ಮುಕ್ತ ಸಮಾಜವನ್ನು ಕಟ್ಟಿರುವ ಪರಿ ಆಧುನಿಕ ಯುಗಕ್ಕೂ ಮಾರ್ಗದರ್ಶಿಯಾಗಿದೆ.

ಬಸವಣ್ಣನವರು ಸತ್ಯಶುದ್ಧ ಕಾಯಕಕ್ಕೆ ನೀಡಿದ ಮಹತ್ವದಷ್ಟೇ ದಾಸೋಹ-ಅನುಭಾವಕ್ಕೂ ಕೊಟ್ಟಿದ್ದರು. ಮಾನವನಲ್ಲಿ ನಿಸ್ವಾರ್ಥಭಾವವು ಅತ್ಯಂತ ಉಚ್ಛ್ರಾಗ್ರತೆಗೆ ಮುಟ್ಟಬೇಕಾದರೆ ದಾಸೋಹ ಮತ್ತು ಅನುಭವ ಅತ್ಯಗತ್ಯ. ಇವುಗಳನ್ನು ರೂಢಿಸಿಕೊಳ್ಳದೇಹೋದರೆ ಸ್ವಾವಲಂಬನೆಗೆ ನಿರಂತರತೆ ಬರಲಾರದು.

ಬಸವಣ್ಣನವರು ಕಟ್ಟಿದ ಸಮಾಜದಲ್ಲಿ ನೈಜತೆಗೆ ಮತ್ತು ಸತ್ಯತೆಗೆ ಪ್ರಾಧಾನ್ಯತೆ ಇತ್ತು ಅವರು ಈ ತೆರೆನಾದ ಸಾಮರಸ್ಯ ಬರಲು ಮುಖ್ಯ ಕಾರಣ ಮಾನವೀಯ ನಡತೆ ಆಗಿದೆ. ಅವರು ಅಂದು ಮಾನವೀಯ ಗುಣಗಳಿಗೆ ಆದ್ಯತೆಯನ್ನು ನೀಡಿದ ಬಗೆಯು ಈ ವಚನದೊಳಗೆ ಹೃದಯಂಗಮವಾಗಿ ವ್ಯಕ್ತಗೊಂಡಿದೆ.

***ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯ***
***ಇವನಮ್ಮವ, ಇವನಮ್ಮವ, ಇವನಮ್ಮವನೆಂದೆನಿಸಯ್ಯ***
***ಕೂಡಲಸಂಗಮದೇವಾ, ನಿಮ್ಮ ಮನೆಯ ಮಗನೆನಿಸಯ್ಯ***

ಪ್ರತಿ ಹಂತದಲ್ಲಿ ಸ್ವಾವಲಂಬನೆಯು ಕರಗತಗೊಳಿಸುವ ಕೌಶಲ್ಯ ಬಸವಣ್ಣನವರಲ್ಲಿ ಇದೆ ಎಂಬುದಕ್ಕೆ ಅವರ ಅನೇಕ ವಚನಗಳಲ್ಲಿ ವ್ಯಕ್ತಗೊಂಡ ಅನುಭಾವವೇ ಸಾಕ್ಷಿಯಗಿದೆ. ಅವರು ಗುಡಿ ಸಂಸ್ಕೃತಿಯನ್ನು ಸಂಪೂರ್ಣವಾಗಿ ತೊಡೆದು ಹಾಕಿ ಶ್ರಮ ಸಂಸ್ಕೃತಿಗೆ ಜನರನ್ನು ಅಣಿಗೊಳಿಸಿದರು. ಹೀಗಾಗಿ ಎಲ್ಲೆಡೆ ದುಡಿಯುವ ಜನರೇ ಕಲ್ಯಾಣ ಪರಿಸರದಲ್ಲಿ ಕಾಣ ಸಿಗುತ್ತಿದ್ದರಲ್ಲದೆ ಅವರೆಲ್ಲರೂ ಸತ್ಸಂಗದಲ್ಲಿ ಭಾಗವಹಿಸಿ ಅನುಭಾವ ಹಂಚಿಕೊಳ್ಳುತ್ತಿರುವುದು ಗಮನಾರ್ಹ ಸಂಗತಿ. ಜಗತ್ತಿನ ಯಾವುದೇ ಭಾಗದಲ್ಲಿ ದುಡಿಯುವ ಜನರು ತಮ್ಮ ಕ್ಷೇತ್ರದ ಅನುಭವಗಳನ್ನು ಸಾಹಿತ್ಯ ಮಾಡಿ ಪ್ರಸಾರಗೊಳಿಸಿದ್ದು ವರದಿಯಾಗದ ಸಂಗತಿಯಾಗಿದೆ.

ಪರಾವಲಂಬಿಗಳು ಜನಸಾಮಾನ್ಯರಲ್ಲಿ ಹುಟ್ಟಿಸಿದ್ದ ಪಾಪ -ಪುಣ್ಯದ ಭೀತಿಯನ್ನು ಬಸವಣ್ಣನವರು ಅತ್ಯಂತ ಸರಳ ವಾಗಿ ತೊಡೆದು ಹಾಕಿದ್ದು ಮನನೀಯವಾಗಿದೆ.

'ಪುಣ್ಯ ಎಂದಡೆ ಸ್ವರ್ಗ; 'ಎಲವೋ' ಎಂದಡೆ ನರಕ!
'ದೇವಾ, ಭಕ್ತ ಜಯಾ, ಜೀಯಾ' ಎಂಬ
ನುಡಿಯೊಳಗೆ ಕೈಲಾಸವಿದ್ದುದೇ ಕೂಡಲಸಂಗಮದೇವಾ'

ಬಸವಣ್ಣನವರ ಬದುಕು ಸಕಲ ಜೀವಾತ್ಮರಿಗೆ ಲೇಸನ್ನು ತರುವ ನಿರ್ಭಯದ ಮತ್ತು ಸ್ವಾವಲಂಬನೆ ಹಾಗೂ ದಯೆಕ್ಕೆ ಪ್ರತ್ಯಕ್ಷ ಪ್ರಮಾಣವಾಗಿದೆ. ಅವರ ವಚನಗಳನ್ನು ಅಧ್ಯಯನ ಮಾಡುವುದೆಂದರೆ ತಮ್ಮ ತಮ್ಮಲ್ಲಿರುವ ಅವಗುಣಗಳನ್ನು ಅಳಿಸಿಕೊಂಡು ಪರಾವಲಂಬಿತನ ಕಳೆದುಕೊಂಡು ಸತ್ಯ-ಶುದ್ಧ ಕಾಯಕದೊಳಗೆ ನಿರತರಾಗುವುದಾಗಿದೆ. ಹೀಗಾಗುವುದೇ ಶರಣತತ್ವವಾಗಿದೆ ದಯಾನಿಧಿ ಬಸವಣ್ಣನವರ ಬದುಕಿನ ಸಂದೇಶವಾಗಿದೆ.

❖

## ವಚನಗಳು

ಮಾಡುವಂತಿರಬೇಕು ಮಾಡದಂತಿರಬೇಕು
ಮಾಡುವ ಮಾಟದೊಳಗೆ ತಾನಿಲ್ಲದಂತಿರಬೇಕು
ಕೂಡಲಸಂಗಮದೇವರ ನೆನೆವುತ್ತ ನೆನೆವುತ್ತ
ನೆನೆಯದಂತಿರಬೇಕು

* * *

ಎಡದ ಪಾದದಲೊದ್ದಡೆ ಬಲದ ಪಾದವ ಹಿಡಿವೆ
ಬಲದ ಪಾದದಲೊದ್ದಡೆ ಎಡದ ಪಾದವ ಹಿಡಿವೆ
ತ್ರಾಹಿ ತ್ರಾಹಿ ತಪ್ಪೆನ್ನದು, ಕ್ಷಮೆ ನಿಮ್ಮದು
ಕೂಡಲಸಂಗಮದೇವ
ನಿಮ್ಮ ಕರುಣದ ಕಂದ ನಾನು

* * *

*ಆರಾರ ಸಂಗವೇನೇನ ಮಾಡದಯ್ಯ?*
*ಕೀಡೆ ಕುಂಡಲಿಗನಾಗದೇ ಅಯ್ಯ*
*ಚಂದನದ ಸನ್ನಿಧಿಯಲ್ಲಿ ಪರಿಮಳ ತಾಗಿ*
*ಬೇವು ಬೊಬ್ಬಿಲಿ ತರಿಯ ಗಂಧಂಗಳಾಗವೆ ?*
*ನಮ್ಮ ಕೂಡಲಸಂಗನ ಶರಣರ ಸನ್ನಿಧಿಯಿಂದ*
*ಕರ್ಮ ನಿರ್ಮಳವಾಗದಿಹುದೆ ?*



## ಶ್ರೀ ಸಿದ್ಧಲಿಂಗೇಶ್ವರ ವಚನ

ಕೆರೆ ಒಡೆದ ಬಳಿಕ ತೂಬು ಒಡೆಯಬಲ್ಲುದೇ? ಒಡೆದ ಮಡಿಕೆಗೆ ಒತ್ತು ಮಣ್ಣ ಕೊಟ್ಟರೆ (ಮೆತ್ತಿದರೆ) ನಿಲ್ಲಬಲ್ಲುದೆ ಅಯ್ಯ? ಮುತ್ತು ಒಡೆದರೆ ಹತ್ತಬಲ್ಲುದೇ ಅಯ್ಯ? ಸುರಚಾಪ ನಿರ್ಧರವಾಗಬಲ್ಲುದೇ ಅಯ್ಯ? ಚಿತ್ತ ಒಡೆದರೆ ಭಕ್ತಿ ನೆಲೆಗೊಳ್ಳದು. ಭಕ್ತಿ ಬೀಸರವಾದರೆ ಮುಕ್ತಿ ಎಂಬುದು ಎಂದಿಗೂ ಇಲ್ಲ ಕಾಣಾ. ಇದು ಕಾರಣ ಚಿತ್ತ ಲಿಂಗವನಪ್ಪಿ ಒಡೆಯದೆ ಭಕ್ತಿ ಬೀಸರವೊಗದೆ ನಿಮ್ಮ ಕೂಡಿ ನಿತ್ಯ ನಿರ್ಮುಕ್ತನಾದೆನು ಕಾಣಾ. ಎಲ್ಲರ ಪರಿಯಂತಲ್ಲ, ಎನ್ನ ಪರಿ ಬೇರೆ ನೋಡಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

### ಶ್ರೀವಾಣಿ

ಮಾನವನಾಗಿ ಹುಟ್ಟಿದ ಮೇಲೆ ಮಾನವನಾಗಿ ಬೆಳೆಯಬೇಕೇ ವಿನಃ ಮೃಗವಾಗಿ ಬದುಕುವುದಲ್ಲ. ಅವನ ಒಂದೊಂದು ಭಾವನೆಯೂ ಮಾನವ ಕಲ್ಯಾಣಕ್ಕೆ ಮೀಸಲಾಗಬೇಕು. ಏನಾದರೂ ಆಗು ಮೊದಲು ಮಾನವನಾಗಿ ಬದುಕುವ ಭಾವನೆಗಳನ್ನು ಬೆಳೆಸಿಕೊಳ್ಳಬೇಕು. ವ್ಯಕ್ತಿತ್ವ ವಿಕಸನಕ್ಕೆ ಸದ್ಭಾವನಾಯುಕ್ತ ಸಂಸ್ಕಾರಗಳ ಮಾರ್ಗದರ್ಶನ ಅಗತ್ಯವಾಗಿರಬೇಕು. ಈ ಉದಾತ್ತ ಭಾವನೆಗಳನ್ನು ಬಿತ್ತುವ ಯೋಗ್ಯರ ಸಂಪನ್ನರ ಸಹವಾಸವೂ ಬೇಕು. ಆಗಲೇ ನೆಮ್ಮದಿ ಶಾಂತಿ ಸಮೃದ್ಧಿ.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಮಕ್ಕಳಾಟಿಕೆ ಕಂಡು ಮನದೊಳಗೆ ನಗುತಿರುವ<br>
ಮಹಕೆ ಮಹವಾಗಿ ಆಟಿಪ । ನನ್ನ ತಂದೆ<br>
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜ್ಞಾನಸಮಾಧಿತ ಭಾವ ಸಮಾಧಿತ<br>
ಜ್ಞಾನಕ್ರಿಯೆ ಬೆಸೆದ ಧೀಮಂತ । ನನ್ನತಂದೆ<br>
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನ್ನಿಂದಧಿಕವೆನಿಪಗುರುವ ನಾ ಕಾಣೆನು<br>
ಗುರುಕುಲಕೆ ಗುರುವಾದ ಪರಮನೆ । ನನ್ನ ತಂದೆ<br>
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವಿಪರೀತ ಚರಿತನೀ ವಿಶ್ವಾತ್ಮಭರಿತನೀ<br>
ವಿಸ್ಮಯ ವಿವರಕೆ ಕಾರಣ । ನನ್ನ ತಂದೆ<br>
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರುತತ್ವ ಜಂಗಮ ಪ್ರಜ್ವಲಿತ ಮಾಡಿದೆ<br>
ಸಿರಿಶಿವ ದಾಸೋಹ ಬೆಳಗಿದ । ನನ್ನ ತಂದೆ<br>
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನಗಲ್ಲದಾರಿಗೆ ಸಾರಿತ್ತು ನಿಜಸ್ಥಲ<br>
ನಿನಗೆ ಮೊರೆಹೊಕ್ಕಿರುವೀ ಜಗಸ್ಥಲ । ನನ್ನತಂದೆ<br>
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅವಧಾರು ಅವಧಾರು ಅವಧಾರು ಘನಗುರುವೆ<br>
ಅವಧಾರು ಬಿನ್ನಪವ ಶಿವಸಿರಿಯೆ । ನನ್ನ ತಂದೆ<br>
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನ್ನ ಒಲವಿನ ಗಂಗೆ ಸಲಿಲದಲಿ ಮಿಂದವರು<br>
ಮನುಜಮಂಗಳ ದೀಪರೆನಿಸಿಹರು । ನನ್ನ ತಂದೆ<br>
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನ್ನ ನೆನಹಿನಲಿರಲು ರಾಹು ಕೇತುವು ಬಹವೆ<br>
ಲಗ್ನವಿಘ್ನಗಳುಂಟೆ ನಾನಂಬೆ । ನನ್ನ ತಂದೆ<br>
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಇಷ್ಟಲಿಂಗಾಲಯದಿ ಸೃಷ್ಟಿಸಕಲವಕಾಯಿ<br>
ಶ್ರೇಷ್ಠ ಶಿವಯೋಗ ಚಂದಿರ । ನನ್ನ ತಂದೆ<br>
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







## ಸ್ವಾವಲಂಬಿ ಸಮಾಜ ನಿರ್ಮಿಸಿದ ಬಸವಣ್ಣ ದಯಾನಿಧಿ

–ಸ.ರಾ. ಸುಳಕೂಡೆ *

ಕಾಲ ದೇಶಕ್ಕೆ ಅನುಗುಣವಾಗಿ ಸಮಾಜವನ್ನು ಸುಸೂತ್ರಗೊಳಿಸುವ ಪ್ರಕ್ರಿಯೆಗೆ ಮಹತ್ವವಿದೆ. ಜನಸಾಮಾನ್ಯರಿಗೆ ಬದುಕಿನ ರೀತಿ ನೀತಿ ಕಲಿಸುವ ಕಾರ್ಯವು ನಿರಂತರತೆಯ ಭಾಗವೇ ಆಗಿದೆ. ಜಗತ್ತು ವಿಶಾಲವಾಗಿದೆ. ಜಗತ್ತಿನ ಸೊಗಸು, ಸೌಂದರ್ಯಕ್ಕೆ ಯಾವುದೇ ಧಕ್ಕೆಯಾಗ ಬಾರದು ಎಂಬುದೇ ತಮ್ಮ ತಮ್ಮ ಕಾಲದ ಸುಧಾರಕರ, ದಾರ್ಶನಿಕರ ಅಂಬೋಣವೇ ಆಗಿದೆ. ಜಗತ್ತು ತನ್ನ ವಿಶಾಲತೆಯನ್ನು ಹಲವು ಕಾರಣಗಳಿಂದ ತೆರೆದುಕೊಳ್ಳಲು ಸಾಧ್ಯವಾಗುತ್ತಿಲ್ಲ. ದೇಶ, ಭಾಷೆ, ಧರ್ಮ, ಆಡಳಿತ ಇನ್ನಾವುದೋ ದೃಷ್ಟಿಕೋನದಿಂದಾಗಿ ಅನೇಕ ಗೋಡೆಗಳು ಪ್ರಚಲಿತಕ್ಕೆ ಬಂದಿವೆ. ಅನಾದಿ ಕಾಲದಲ್ಲಿ ಮಾನವನು ಎದುರಿಸಿದ ಪ್ರಸಂಗಗಳು ಬಲಾಢ್ಯರಿಗಾಗಿಯೇ ಬದುಕು ಎನ್ನುವ ಪ್ರತೀತಿ ನಾವಿಂದು ತಿಳಿದುಕೊಂಡಷ್ಟು ಸುಖವೇನಲ್ಲ. ಇಂದು ಮನುಷ್ಯನು ಪ್ರಾಣಿಜನ್ಯ ಗುಣಗಳನ್ನು ಬಿಟ್ಟಿದ್ದನೆಂದು ಹೇಳುವುದು ಅರ್ಥವಂತಿಕೆಯಿಂದ ಕೂಡಿಕೊಳ್ಳದಿರುವುದೇ ಆಗಿದೆ. ಮಾನವ ಬದುಕಿನಲ್ಲಿ ಚಿತ್ತ ಚಾಂಚಲ್ಯವು ಗುರುತರವಾಗುತ್ತಲಿದೆ. ಇಂಥ ಮನೋಸ್ಥಿತಿಯನ್ನು ದಾಟಿಸುವಲ್ಲಿ ಬಸವಾದಿ ಶರಣರ ವಚನಗಳು ಸಹಕಾರಿಯಾಗಿವೆ. ಈ ವಚನಗಳಲ್ಲಿ ಸ್ವಾವಲಂಬನೆಯ ಝೇಂಕಾರವಿದೆ. ಬಸವಣ್ಣನವರು ಧಾರ್ಮಿಕತೆ, ಧರ್ಮದ ರೀತಿ-ನೀತಿ, ಪೂಜೆ, ಹೋಮ-ಹವನ, ಸ್ವರ್ಗ-ನರಕ ಎಲ್ಲವನ್ನು ಮಾನವನ ಹಿತದೃಷ್ಟಿಯನ್ನು ಇಟ್ಟುಕೊಂಡು ತಾರ್ಕಿಕ ನೆಲೆಯೊಳಗೆ ವಿಶ್ಲೇಷಿಸಿದ್ದಾರೆ. ಧರ್ಮದೊಳಗೆ ಮಾನವೀಯತೆಯ ಪ್ರಾಧಾನ್ಯ ಪಡೆಯುವಂತೆ ಮಾಡಿದ ಬಸವಣ್ಣನವರು ಮನುಕುಲವು ಎದುರಿಸುತ್ತಿದ್ದ ಅನೇಕ ಅನ್ಯಾಯಗಳನ್ನು ಕಿತ್ತು ಹಾಕಿದರು. ಮಾನವನ ಬದುಕು ಎತ್ತರಗೊಳ್ಳಬೇಕಾದರೆ ಇಹದ ಬದುಕನ್ನು ಸರ್ವಶಕ್ತಗೊಳಿಸಿಕೊಳ್ಳಬೇಕಾದ ಅನಿವಾರ್ಯತೆ ಇರುವುದನ್ನು ಪದೇ ಪದೇ ಬಸವಣ್ಣನವರು ನೆನಪಿಸಿದ್ದಾರೆ. ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ನಿರ್ದಯಗಳನ್ನು ನಿವಾರಿಸುವಲ್ಲಿ ಅವರು ವಹಿಸಿದ ಪತ್ರ ವಿನೂತನವಾಗಿದೆ. ಯಜ್ಞ-ಯಾಗಾದಿಗಳಿಂದ ಜನರನ್ನು ಮುಕ್ತಗೊಳಿಸಿದ ಬಸವಣ್ಣನವರು ಧರ್ಮವನ್ನು ದಯದಿಂದ ಕೂಡಿಕೊಂಡಿರುವಂತೆ ನೋಡಿಕೊಂಡಿರುವುದು ವಿಶೇಷ. ದಯವೇ ಧರ್ಮವೆಂದಿರುವ ಬಸವಣ್ಣನವರು ಕಾಯಕವೇ ಕೈಲಾಸವೆಂದು ನಡೆದು ತೋರಿಸಿದ್ದಾರೆ.

೧೨ನೇ ಶತಮಾನದಲ್ಲಿ ಕಲ್ಯಾಣ ನಗರದೊಳಗೆ ವಿವಿಧ ಜನಾಂಗಕ್ಕೆ ಸೇರಿದ ಮತ್ತು ವಿವಿಧ ಕೆಲಸದಲ್ಲಿ ತೊಡಗಿದವರು ಕೇವಲ ಧರ್ಮಗೋಷ್ಠಿ ನಡೆಸಿ ತಮ್ಮ ಉದರ ಪೋಷಣೆ ಮಾಡಿಕೊಳ್ಳದಿರುವುದು ಶ್ರಮ ಸಂಸ್ಕೃತಿಯ ದುಡಿಮೆಯ ಮಹತ್ವವನ್ನು ಬಿಂಬಿಸುತ್ತದೆ. ಮನುಷ್ಯ ತನ್ನ ಉಜ್ವಲ ಭವಿಷ್ಯವನ್ನು ಕಲ್ಪನೆಯೊಳಗೆ ಭ್ರಮೆಯೊಳಗೆ, ಕೈಲಾಸದ ಭರವಸೆಯೊಳಗೆ ಹುಡುಕಾಡುವುದನ್ನು ಬಿಡಿಸಿದ ಬಸವಣ್ಣನವರು ಸ್ವಾವಲಂಬಿಯಾಗುವುದರಲ್ಲಿ ಶಿವ ಬೆಳಕು ಇದೆ ಎಂದು ತೋರಿಸಿಕೊಟ್ಟರು. ಅವರು ಮನುಷ್ಯ ಬದುಕಿನ ಮರ್ಮ ದುಡಿಮೆಯೊಳಗೆ ಇದೆ ಎಂದು ಹೇಳಿದರು. ಬಸವಣ್ಣನವರು ತಮ್ಮ ಉದ್ಧಾರವನ್ನೇ ಮಾಡಿಕೊಂಡು ಉಪದೇಶ ಮಾಡುತ್ತ ಸಾಗಿದವರಲ್ಲ. ಅವರು ಸರ್ವ ಜನಾಂಗವು ಸುಂದರ ಬದುಕು ಕಟ್ಟಿಕೊಳ್ಳಲು ಅನುವು ಮಾಡಿಕೊಟ್ಟರಲ್ಲದೆ ಅವಗುಣಗಳನ್ನು ಸ್ವವಿಮರ್ಶೆ ಸ್ವಯಂ ಸ್ಫೂರ್ತಿಯಿಂದ ತಿದ್ದಿಕೊಳ್ಳಲು ಪ್ರೋತ್ಸಾಹಿಸಿದರು. ಮನುಷ್ಯನು ಮದ-ಮತ್ಸರ-ಮೋಹಗಳನ್ನು ಬಿಟ್ಟು ಸಹ ಬದುಕನ್ನು ನಡೆಸುವ ಪರಿಸರವನ್ನು ನಿರ್ಮಿಸಿದರು. ಧನ-ಕನಕಾದಿಗಳಿಂದ ಗರ್ವವನ್ನು ತೋರಿಸುವವರಿಗೆ ಶರಣ ಸಂಸ್ಕೃತಿಯ ಮರ್ಮವನ್ನು ತಿಳಿಸಿದರು. ದೇಶ-ವಿದೇಶಗಳಿಂದ ಕಲ್ಯಾಣಕ್ಕೆ ಬಂದ ಅಸಂಖ್ಯಾತರು ತಮ್ಮ ಬದುಕಿನೊಳಗೆ ಕಂಡ ಸತ್ಯವನ್ನು

* ೧೩೭೯, ರಾಮತೀರ್ಥನಗರ, ಬೆಳಗಾವಿ -೫೯೦ ೦೧೬.

## ಆತ್ಮವಂಚನೆ

ಇಂದಿನ ನಮ್ಮ ರಾಜಕಾರಣಿಗಳನ್ನು ಸಾಲಾಗಿ ನಿಲ್ಲಿಸಿದ್ದೇ ಆದರೆ ಒಬ್ಬರ ಕೈ ಮತ್ತೊಬ್ಬರ ಜೇಬಿನಲ್ಲಿರುವುದನ್ನು ಕಾಣಬಹುದು. ಹಳ್ಳಿ ಕಡೆಯಲ್ಲಿ ಒಂದು ಮಾತಿದೆ. ಸಂತೆಯಲ್ಲಿ ಮಳೆ ಬಂದಾಗ ಉಪ್ಪಿನಂಗಡಿಯವನು ಗೋಳೋ ಅಂತ ಅತ್ತರೆ ತೆಂಗಿನಕಾಯಿ ಮಾರುವವನು ಉರುಳಿ ಉರುಳಿಕೊಂಡು ಅತ್ತನಂತೆ. ಏಕೆ ಹೀಗೆ ಅಳುತ್ತೀಯಾ ಎಂದು ತೆಂಗಿನಕಾಯಿ ಮಾರುವವನನ್ನು ಕೇಳಿದರೆ 'ಅಯ್ಯೋ ಸ್ವಾಮಿ ತೆಂಗಿನಕಾಯಿ ಒಳಗೆಲ್ಲಾ ನೀರು ನುಗ್ಗಿಬಿಟ್ಟಿವೆ ಏನು ಮಾಡುವುದೀಗ' – ಎಂದನಂತೆ. ಹೀಗಾಗಿದೆ ಇಂದು ನಡೆದಿರುವ ರಾಜಕಾರಣಿಗಳ ದಂಧೆ. ಹಗಲು ಹೊತ್ತು ಪಂಜು ಹಿಡಿದುಕೊಂಡು ಹುಡುಕಿದರೂ ಭ್ರಷ್ಟಾಚಾರ ದೂರನಾಗಿರುವ ಒಬ್ಬನೇ ಒಬ್ಬ ರಾಜಕಾರಣಿ ಕಾಣುವುದಿಲ್ಲ. ಮಹಾನುಭಾವರಿದ್ದರು ಹಿಂದೆ. ಒಬ್ಬ ಲಾಲ್ ಬಹದ್ದೂರ್ ಶಾಸ್ತ್ರಿಗಳು, ಮತ್ತೊಬ್ಬರು ಡಾ॥ ಅಬ್ದುಲ್ ಕಲಾಂ ಅವರು. ಎಲ್ಲಿ ಸಿಕ್ಕಾರು ಇಂದು ಅಂಥವರು. ಕಪ್ಪುಹಣ ವಿದೇಶೀ ಬ್ಯಾಂಕುಗಳಲ್ಲಿದೆ. ಅದನ್ನು ತನ್ನಿ ರಾಷ್ಟ್ರ ಕಲ್ಯಾಣಕ್ಕೆ ವಿನಿಯೋಗಿಸಿ ಎಂದರೆ ಸಾರಾಸಗಾಟಾಗಿ ಪ್ರತಿಭಟಿಸುತ್ತಾರೆ. ಸಾವಿರ ಸಾವಿರ ಕೋಟಿಗಳನ್ನು ತಮ್ಮ ಕುಟುಂಬ ದವರ ಹೆಸರಿನಲ್ಲಿ ಗುಪ್ತವಾಗಿಟ್ಟಿರುವ ನಾಯಕರು ಭ್ರಷ್ಟಾಚಾರದ ವಿರುದ್ಧ ಪತ್ರಿಕೆಗಳಿಗೆ ಹೇಳಿಕೆ ಕೊಡುತ್ತಾರೆ. ಇದಕ್ಕಿಂತ ಆತ್ಮವಂಚನೆ ಇದೆಯೇ? ಭ್ರಷ್ಟಾಚಾರದ ಬೆಂಕಿಯಲ್ಲಿ ಬಡಪ್ರಜೆ ಉರಿದು ಹೋಗುತ್ತಿದ್ದಾನೆ. ಲಜ್ಜೆಬಿಟ್ಟು ಲಂಚ ಕೇಳುವ ಸರ್ಕಾರದ ಹಣವನ್ನು ಕೊಡುವ ಸಂದರ್ಭದಲ್ಲಿ ಪರ್ಸಂಟೇಜ್ ಕೇಳುವ ಜಿಗುಣೆ ವಿಧಾನ ರಾಜಾರೋಷವಾಗಿಬಿಟ್ಟಿದೆ. ಅಡಿಯಿಂದ ಮುಡಿಯತನಕ ಭ್ರಷ್ಟಾಚಾರ ವಿಜೃಂಭಿಸಿದೆ. ಈ ದಂಧೆಯಲ್ಲಿ ಅವರನ್ನು ಬಿಟ್ಟು ಇವರನ್ನು ಬಿಟ್ಟು ಅವರ್‍ಯಾರು ಅನ್ನುವಂತಾಗಿದೆ. ಎರಡೂ ಕೈಸೇರದೆ ಚಪ್ಪಾಳೆ ಆಗುವುದಿಲ್ಲ ಅಲ್ಲವೇ? ಭ್ರಷ್ಟಾಚಾರದಲ್ಲಿ ಎಲ್ಲರದೂ ಪಾಲಿದೆ ತಾನೆ ? ಹಾಗಾದರೆ ಈ ದಂಧೆಗೆ ಮುಕ್ತಿ ನೀಡುವ ಮುಕ್ಕಣ್ಣ ಎಂದು ಬಂದಾನು? ಎಂದು ಬಡವ ಗೋಳಿಡುತ್ತಿದ್ದಾನೆ.

–ಸಂಪಾದಕ







## ಕಾಣದಿರುವ ಮನುಷ್ಯ

ಕಾಣುವ ಮನುಷ್ಯ ಕಾಣದಿರುವ ಮನುಷ್ಯ. ಕಾಣುವ ಮನುಷ್ಯನನ್ನು ಯಾರು ಬೇಕಾದರೂ ನೋಡಬಹುದು. ಆದರೆ ಕಾಣದಿರುವ ಮನುಷ್ಯನನ್ನು ಕಾಣುವ ಸಾಧನೆ ನಮ್ಮದಾಗಬೇಕು. ಅದು ಹೇಗೆ ? ನಡೆ, ನುಡಿ, ಕೃತಿ ಚಿಂತನೆಗಳಲ್ಲಿ ಅವನನ್ನು ಕಾಣಬಹುದು. ಅವನ ಮಾತಿನಲ್ಲಿ ಪರಹಿತವಿರುತ್ತದೆ. ಅವನ ನಡೆಯಲ್ಲಿ ಪರೋಪಕಾರವಿರುತ್ತದೆ. ಅವನ ಕೃತಿಯಲ್ಲಿ ಲೋಕಕಲ್ಯಾಣ ಕಾಣುತ್ತದೆ. ಅವನ ಚಿಂತನೆಗಳಲ್ಲಿ ಮಂಗಳ ದೃಷ್ಟಿಯಿರುತ್ತದೆ. ಅಂತಹ ಕಾಣದಿರುವ ಮನುಷ್ಯ ಎಲ್ಲರಲ್ಲಿ ಇರುತ್ತಾನೆ. ಅವನನ್ನು ಕಾಣುವುದಕ್ಕೆ ಅಂತರ್ಮುಖಿಯಾಗುವ ಸಾಧನೆಬೇಕು. ಕಾಣುವ ಮನುಷ್ಯನ ಎಲ್ಲ ಕ್ರಿಯೆಗಳಿಗೂ ಅವನೇ ಮೂಲಾಧಾರ. ಅವನ ಪ್ರೇರಣೆ ಯಿಲ್ಲದೆ ಯಾವುದೂ ನಡೆಯದು. ಅವನಿಂದಲೇ ಭೂತ, ವರ್ತಮಾನ, ಭವಿಷ್ಯತ್ತುಗಳ ಕಾಣ್ಕೆ.

ಮಾನವನಾಗುವುದಕ್ಕೆ ಮುಂಚೆ ಕಲ್ಲಾಗಿದ್ದೆ, ಮಣ್ಣಾಗಿದ್ದೆ, ಸಸ್ಯವಾಗಿದ್ದೆ, ಪ್ರಾಣಿಯಾಗಿದ್ದೆ, ಪಶುವಾಗಿದ್ದೆ, ಪಕ್ಷಿಯಾಗಿದ್ದೆ, ಲಕ್ಷ ಲಕ್ಷ ಬಾರದ ಯೋನಿಗಳಲ್ಲಿ ಬಂದೆ ಬಂದೆನೆಂಬ ಅರಿವಾದಾಗ ಕಾಣದಿರುವ ಮನುಷ್ಯ ಕಾಣ ಬರುತ್ತಾನೆ. ಅವನನ್ನು ಕಾಣುವ ಶಕ್ತಿ ಇರುವುದು ಮನುಷ್ಯನೊಬ್ಬನಿಗೆ ಮಾತ್ರ. ಪಶು, ಪಕ್ಷಿ, ಪ್ರಾಣಿಗಳು ಅವನನ್ನು ಕಾಣಲಾರವು. 'ಪರಮಾತ್ಮನುಳಿಮೆ ತಾನೆಂದು' ತಿಳಿದಾಗ ಆ ಕಾಣಿದಿರುವ ಅವನನ್ನು ಕಾಣಲಾರವು. 'ಪರಮಾತ್ಮನುಳಿಮೆ ತಾನೆಂದು' ತಿಳಿದಾಗ ಆ ಮನುಷ್ಯನನ್ನು ಕಾಣಲಾರವು. 'ಪರಮಾತ್ಮನುಳಿಮೆ ತಾನೆಂದು' ತಿಳಿದಾಗ ಆ ಕಾಣದಿರುವ ಮನುಷ್ಯನನ್ನು ಕಾಣಬಹುದು. ಆತನನ್ನು ಕಂಡ ಮೇಲೆ 'ಸ್ಥಿರಮುಕ್ತಿ ಪಡೆಯಬೇಕೆಂಬ ಹಂಬಲ ಅವನದಾಗುತ್ತದೆ. ಆದುದರಿಂದ ಮಾನವ ಜನ್ಮದ ಶ್ರೇಷ್ಠತೆಯಿರುವುದು ಹಣ ಸಂಪಾದನೆಯಲ್ಲಲ್ಲ, ಆಸ್ತಿಗಳಿಕೆಯಲ್ಲೂ ಅಲ್ಲ, ಅಧಿಕಾರ ಪಡೆಯುವುದರಲ್ಲಲ್ಲ, ಅದಿರುವುದು ಕಾಣದಿರುವ ತನ್ನೊಳಗಿರುವ ಮನುಷ್ಯನನ್ನು ಕಾಣುವುದರಲ್ಲಿ. ಆ ಕಾಣದಿರುವ ಪುಣ್ಯಪುರುಷನೇ ಆತ್ಮ. ಆತ್ಮದರ್ಶನ, ಆತ್ಮಚಿಂತನ, ಆತ್ಮಸಂವಾದ, ಆತ್ಮವಿಮರ್ಶೆ, ಆತ್ಮಸಂಪಾದನೆಯೇ ಕಾಣದಿರುವ ಮನುಷ್ಯ.

॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಾಗ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೪೭ ಜೂನ್ ೨೦೧೧ ಸಂಚಿಕೆ : ೩

ಸಂಪಾದಕ : ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ : ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ : ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ –572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು –572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ –೫೭೨ ೧೦೪


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ

## ಒಳಪುಟಗಳಲ್ಲಿ ..................


೨. ಸಂಪಾದಕೀಯ
೩. ಶ್ರೀವಾಣಿ
೪. ಸಿದ್ಧಲಿಂಗೇಶ್ವರ ವಚನ –ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ
೫. ಸ್ವಾವಲಂಬಿ ಸಮಾಜ ನಿರ್ಮಿಸಿದ ಬಸವಣ್ಣ ದಯಾನಿಧಿ –ಸ.ರಾ. ಸುಳಕೂಡೆ
೮. ಯಶಸ್ವೀ ಜೀವನದ ಮೆಟ್ಟಿಲುಗಳು –ಡಾ॥ ಆರ್.ಬಿ. ಚಿಲುಮಿ
೯. ಸಹವಾಸ –ಗೊ.ರು. ಚನ್ನಬಸಪ್ಪ
೧೧. ಕ್ರಾಂತಿಕಾರಿ ಶರಣ ಅಂಬಿಗರ ಚೌಡಯ್ಯ –ಟಿ.ಆರ್. ಮಹಾದೇವಯ್ಯ
೧೪. ಶಿಕ್ಷಣ
೧೫. ಶರಣರ ಸಾಮಾಜಿಕ ಕೊಡುಗೆ –ಪ್ರೊ. ಬಿ.ಎಸ್. ಗಂಗನಳ್ಳಿ
೧೯. ಕುರುಬ ಗೊಲ್ಲಾಳ –ರುದ್ರೇಶ್ ಬಿ. ಅದರಂಗಿ
೨೩. ನಾನು ಒಂದು ಜಿಜ್ಞಾಸೆ –ಕೆ.ಎಸ್. ಮಹದೇವಪ್ಪ
೨೫. ಸಾವು ಮಿತ್ರನೋ? ಶತ್ರುವೋ –ಜಯದೇವಪ್ಪ ಜೈನಕೇರಿ
೨೭. ಒಂದು ಊಟಕ್ಕೆ ಒಂದು ಲಕ್ಷ ರೂ, ಒಂದು ನೋಟಕ್ಕೆ ಅದಕ್ಕೂ ಮಿಗಿಲು –ಎಸ್. ರೇಣುಕಾರಾಧ್ಯ
೨೯. ಆರೋಗ್ಯಾಭ್ಯಾಸಗಳು –ಡಾ॥ ರಾಜಶೇಖರ ಜಮದಂಡಿ
೩೦. ಶ್ರೀ ಶ್ರೀಗಳವರಲ್ಲಿ ನಾವು ಕಂಡ ಪ್ರೀತಿಯ ಮಹಾಪೂರ –ಕೆ.ಜಿ. ರಂಗಯ್ಯ



ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/–
ಆಜೀವ ಸದಸ್ಯತ್ವ ರೂ. ೧೦೦೦/– ಬಿಡಿ ಪ್ರತಿ ರೂ. ೧೦.೦೦

RNI No. 17139/69 "Siddaganga" Monthly - Postal Reg. No. KA/SK/TMR/385/2009-11

# ೨೦೧೧-೧೨ ನೇ ಶೈಕ್ಷಣಿಕ ಸಾಲಿಗೆ ಶ್ರೀಮಠದಲ್ಲಿ ವಿದ್ಯಾರ್ಥಿಗಳ ದಾಖಲಾತಿ ಪ್ರಕ್ರಿಯೆಯ ದೃಶ್ಯಾವಳಿಗಳು










Cover printed at : Geetanjali Graphics, B-71, KSSIDC Indl. Area, 6th Block, Rajajinagar, Bengaluru-10. Ph : 23404232